इति भक्षयामास । तत्क्षणं शान्ताशनायः स मुनिरम्बरीषं स्मृत्वा वृथा पाचनादपराद्धमानी स्वयं भीतोऽनुक्त्वैव सशिष्यः परागतः ।

अथ सिन्धुराजो दुःशलापतिर्जयद्रथः स्यालपत्नीं द्रौपदीमेकाकिनीं दृष्ट्वाश्रमादपहरन्नर्जुनसहायेन भीमेन पञ्चशिखः कृतो, घृणिना राज्ञा मोचितः पशुपतिमाराध्य ततोऽर्जुनवर्जं पाण्डवानेकाहं जेतुं वरं लेभे। अथ भार्यापहरणविषण्णं राजानं मार्कण्डेय आचचक्षे—'ननु श्रूयते ह्यैक्ष्वाकस्य रामस्य चरितम् । स हि पितृवचनेन दण्डकास्वनुजमात्रसहायो वसन् विजने स्वभार्यां जानकीं राक्षसापहृतां विचिन्वन् कपिकुलानुप्लवो महता परिकरबन्धेन पारेसिन्धु संवत्सरान्ते पुनर्लब्धवान्—त्वं तु मुहूर्तात्क्रोशमात्रादहार्षीः । नहि धीरा विपदि धैर्यं जहति । तदलं सन्तापेन' इति सान्त्वितः पुनः प्राह—'मुने ! इयं व्यसनमहार्णवमग्नानामस्माकं प्लवभूता । क्वेदृशी भर्त्रवलम्बनभूता स्त्री स्यात् । तदस्या दुःखं मां दुःखाकरोति' इति । मुनिरपि तं प्रत्यूचे 'ननु निसर्ग एवैष पतिव्रतानाम् । तथाहि–किं नाश्रौषीः सावित्रीम् । सा हि भर्तारं सत्यवन्तं, अन्धौ श्वशुरौ च वने नियमेन परिचरन्ती, भर्तुरायुरल्पावशेषं विदित्वा तदभिवृद्धये व्रतं चरन्ती, प्राप्ते तु तद्दिने फलाय वनान्तरं गच्छन्तं पतिमनुगच्छन्ती, स्वतपसा प्रसन्नान्मृत्योः, पत्युर्दीर्घायुः, आत्मनः स्वमातुश्च बहुपुत्रतां श्वशुरयोर्नेत्रराष्ट्रयोः प्राप्तिं च वराँल्लब्ध्वा, कुलद्वयमुद्धरन्ती लोके च महनीया बभूवे'ति समाश्वासयामास ।

जातुचिदातिथेयो वैकर्तन आतिथ्यकाले प्राप्तेन केनचिद्विप्रेण सहजं कवचं कुण्डले चार्थ्यमानः स्वप्नेऽर्केणोक्तमर्थं स्मरन्नाह—'भगवंस्त्रिदशेश्वर ! ज्ञातोऽसि मया । यदि पुत्रार्थमर्थी भवांस्तर्हि स्वशक्तिविनिमयेन प्रतीच्छत्वभीष्टम्' इति । तथा प्रतिगृह्णन् इन्द्रः सहजमङ्गवेष्टनादिकृत्तवतोऽपि तव शरीरे विकृतिर्माभूत् । एषा च मम शक्तिः कृच्छ्रगतस्य तवैकं शत्रुं क्षपयित्वा मामुपैष्यति । अकृच्छ्रे प्रयुक्ता तु त्वामेव हन्यात्' इत्याश्रुत्यान्तर्धिमगात् । सोऽप्येवं कर्तनात्कर्ण इति प्रख्यातः ।

अथ द्वैतवने कस्यचिदाहिताग्नेररणीमन्थं शृङ्गेणादाय धावन्तं मृगमनुधावमानेषु उदन्यया कस्मिंश्चित्सरस्युदकं पीत्वा पतितेषु चतुर्ष्वपि भ्रातृषु, स्वयमपिताननुगन्तुकामो धर्मपुत्रो यक्षरूपेण स्वपित्रा निषिद्धस्तत्प्रश्नान् व्याचचक्षे। तेन चैकस्यानुजस्योज्जीवनवरे दत्ते, माद्र्या अपि पुत्रवत्त्वाभावं परिजिहीर्षुः स नकुलस्य जैवातृकत्वमयाचत। तया तस्य समत्वबुध्या तुष्टः समवर्ती चतुरश्च तानुत्थाप्य, अरणीमन्थं च प्रत्यर्प्य आसन्ने त्रयोदशे वर्षे परैरज्ञास्यमानत्ववरं दत्वा चक्षुरविषयो बभूव। ते तु श्वो भाविन्यज्ञातवासे सर्वाननुयायिवर्गानभीष्टदेशगमनायानुज्ञाप्य, विविक्ते पत्न्या पुरोधसा च सह मन्त्रयाञ्चक्रिरे।

---

साद्यस्क्रे—ಒಂದೇ ದಿನದಲ್ಲಿ ನಡೆಸುವ ಸೋಮಯಾಗ

घोषयात्रमिषेण—ಗೊಲ್ಲರ ಹಳ್ಳಿಗೆ ಹೋಗುವ ನೆಪದಿಂದ

अङ्गराजेन, महाराजः, कुरुराजः — राजाहस्सखिभ्यष्टच् ಎಂಬ ಅನುಶಾಸನದಂತೆ राजन् ಶಬ್ದವು ಅಕಾರಾಂತವಾಗಿದೆ

व्यवसित—ನಿಶ್ಚಯ, ತೀರ್ಮಾನ

अभिसारः—ಪ್ರಯತ್ನ

अभियोक्तुं—ಹೋರಾಡಲು

दुर्जातं— ದುರದೃಷ್ಟ, ಹಾನಿ

ईष्टे—ईश्—ಆ. ಪ. ಲಟ್

सिंहविक्रान्तगतिना—सिंहस्य विक्रान्तिः— विक्रान्तिरिव गतिः यस्य सः

व्यदृश्यत—वि+अदृश्यत—ಆ. ಪ. ಲಙ್

मलिम्लुचः—ಚೋರ

किरीटिन्—ಅರ್ಜುನ

विप्रतिषेधः—ಪರಸ್ಪರ ವಿರೋಧ

सवनस्थ—ಯಜ್ಞ ದೀಕ್ಷಿತ

अपशदः—ನೀಚ

कदर्थयितुं—ಹೀಯಾಳಿಸಲು, ಹಿಂಸಿಸಲು
मर्षयितव्य:—ಕ್ಷಮಾರ್ಹವಾದುದು
विमानना—ಅವಮಾನ
मा कार्षी:—ಮಾಡಬೇಡ मा+अ कार्षी:ಪ. ಪ. लुङ्:
न ᳚ .ಗೆ ಎಂಬ ಅನುಶಾಸನದ ಪ್ರಕಾರ लुङ् ಲಕಾರದ अडागम ಕ್ಕೆ ನಿಷೇಧ ಬಂದಿದೆ.
विमृड्ढि—भुज्—लोट् ಪ. ಪ. ಮ. ಪು. ಏ ವ.
प्रायोपवेशेन—ಉಪವಾಸದಿಂದ
संस्थास्ये—ಸಾಯುತ್ತೇನೆ समवप्रविभ्य: स्थ:—ಎಂಬ ಅನುಶಾಸನದ ಪ್ರಕಾರ स्था ಧಾತುವಿಗೆ
ಸಮ್, ಅವ, ಪ್ರ, ವಿ ಎಂಬ ಉಪಸರ್ಗಗಳು ಬಂದಾಗ ಅದು ಆತ್ಮನೇ ಪದಿಯಾಗುತ್ತದೆ.
महीतलं अधिशिष्ये ನೆಲದಲ್ಲಿ ಮಲಗಿದನು. अधिशीङ् स्यासां कर्म ಎಂಬ ಅನುಶಾಸನದಂತೆ
ದ್ವಿತೀಯ ವಿಭಕ್ತಿ ಬಂದಿದೆ.
प्रकृतिभि —ಪ್ರಜೆಗಳಿಂದ
परिभव:—ಅವಮಾನ
शाधि—शास् ಧಾತು ಪ.ಪ. लोट् ಮ.ಪು. ಏ.ವ.
पात्रेसमितः—ಊಟಕ್ಕೆ ಮಾತ್ರ ತಪ್ಪದ पात्रे समितः—ಅಲುಕ್ ಸಮಾಸ
मा भू:—मा कार्षी: ನೋಡಿ
विकत्थनः—ಆತ್ಮ ಪ್ರಶಂಸಾಪರ
अवभृथे—ಯಾಗಾನಂತರದ ಸ್ನಾನದಲ್ಲಿ
प्रतिजज्ञे—प्रति+ज्ञा ಆ.ಪ. लिट्
वरिवस्या—ಸತ್ಕಾರ-ಗೌರವ-ಶುಶ್ರೂಷೆ
अयुत—ಹತ್ತುಸಾವಿರ
अक्षय्य—ಕ್ಷಯವಾಗದ · क्षयितुं अशक्यं क्षय्यजय्यौ शक्यार्थे ।
शान्ताशनाय:—ಇಂಗಿದ ಹಸಿವುಳ್ಳವನು
अपराद्धमानी—अपराद्धं आत्मानं मन्यत इति
दु:शलापतिः—ದುರ್ಯೋಧನನ ತಂಗಿ, ದುಃಶಲೆಯ ಪತಿ ಜಯದ್ರಥ
स्याल:—ಭಾವ, ಭಾವಮೈದುನ
पञ्चशिखः—ತಲೆಬೋಳಿಸಲ್ಪಟ್ಟವನು
अश्रौषी:—श्रु ಧಾತು ಪ.ಪ. ಲುಙ್‌ಮ.ಪು. ಏ.ವ.
वैकर्तन:—ಸೂರ್ಯಪುತ್ರ, ಕರ್ಣ
अरणीमन्थः—ಯಜ್ಞಕ್ಕಾಗಿ ಬೆಂಕಿಕಡೆಯುವ ಕಟ್ಟಿಗೆಗಳು
उदन्या—ನೀರಡಿಕೆ
अनुगन्तुकाम:—तुं काममनसोरपि ಎಂಬ ಅನುಶಾಸನದ ಪ್ರಕಾರ काम ಮತ್ತು मनस् ಶಬ್ದಗಳು

ತುಮುಣ್ಣತ ಗಳೊಡನೆ ಸೇರಿದಾಗ 'म' ಕಾರ ಲೋಪವಾಗುತ್ತದೆ.

जैवातृकत्वं—ಬದುಕುವಿಕೆ

समवर्ती—ಯಮು समवती परेतराट्

श्वो भाविनि—ನಾಳೆ ಆಗುವ

पुरोधस्—ಪುರೋಹಿತ

विविक्ते—ಏಕಾಂತದಲ್ಲಿ

मन्त्रया चक्रिरे—10ನೇ ಧಾತುಗಳಿಗೆ परस्मै लिट् ಲಕಾರದಲ್ಲಿ आस, बभूव, चकार ಎಂಬ ರೂಪಗಳೂ ಆತ್ಮನೇ ಪದಿಯಲ್ಲಿ चक्रे चक्राते चक्रिरे ಇತ್ಯಾದಿ ರೂಪಗಳೂ ಸೇರುತ್ತವೆ.

1. ಪಾಂಡವರನ್ನು ಅವಮಾನ ಪಡಿಸಲು ಪ್ರಯತ್ನಿಸಿದ ದುರೋಧನನ ಗತಿ ಏನಾಯಿತು ? ವಿವರಿಸಿ
2. ಅವಮಾನದಿಂದ ಪ್ರಾಣ ತ್ಯಾಗ ಮಾಡಬಯಸಿದ ದುರೋಧನನನ್ನು ಯಾರು ಹೇಗೆ ಸಾಂತ್ವನಗೊಳಿಸಿದರು ?
3. ಪಶ್ಚಾತ್ತಾಪವಿಲ್ಲದೆ ದುರೋಧನನು ಮತ್ತೊಮ್ಮೆ ಪಾಂಡವರಿಗೆ ತೊಂದರೆ ಕೊಡಲು ಹೇಗೆ ಯತ್ನಿಸಿದನು ?
4. ದ್ರೌಪದಿಯನ್ನು ಯಾರು ಅಪಹರಿಸಿದರು ? ಈ ಅವಮಾನದಿಂದ ವಿಷಣ್ಣನಾದ ಯುಧಿಷ್ಠಿರನನ್ನು ಯಾರು ಹೇಗೆ ಸಮಾಧಾನ ಪಡಿಸಿದರು ?
5. ಬ್ರಾಹ್ಮಣ ವೇಷದಲ್ಲಿ ಬಂದ ಇಂದ್ರನಿಗೂ ಕರ್ಣನಿಗೂ ಆದ ಸಂವಾದವನ್ನು ವಿವರಿಸಿ
6. ಬಾಯಾರಿಕೆಯಿಂದ ಆತುರಪಟ್ಟು ನೀರು ಕುಡಿದು ಬಿದ್ದುಹೋದ ಭೀಮಾದಿಗಳನ್ನು ಬದುಕಿಸಿದ್ದು ಹೇಗೆ ?
7. ಸಂದರ್ಭ ತಿಳಿಸಿ ಟಿಪ್ಪಣಿ ಬರೆಯಿರಿ.

   1. विषमोहि विधेर्विपरिणामः ।
   2. शीर्षच्छेद्योऽयं दुरात्मा सदापि पाण्डवद्विट् ।
   3. अहं तु प्रायोपवेशेन संस्थास्ये ।
   4. वृथा निर्विण्णो मा भूः ।
   5. अकृच्छ्रे प्रयुक्ता त्वमेव हन्यात् ।

---

# (ಆ) ಕಾದಂಬರೀ ಸಂಗ್ರಹಃ—ಶುಕನಾಸೋಪದೇಶಃ

**ಮಹಾಕವಿ ಬಾಣ—**

ಬಾಣನು ಗದ್ಯಸಾಹಿತ್ಯದ ಅನಭಿಷಿಕ್ತ ಸಾರ್ವಭೌಮ. ಕಾದಂಬರೀ ಹರ್ಷಚರಿತಗಳು ಅವನ ಕೃತಿಗಳು. ಎರಡೂ ಗದ್ಯಕಾವ್ಯವೇ ಎರಡೂ ಅಪೂರ್ಣವೇ; ಕಾದಂಬರಿಯ ಉತ್ತರ ಭಾಗ ವನ್ನು ಅವನ ಮಗ ಭೂಷಣ ಭಟ್ಟನು ಪೂರ್ಣಗೊಳಿಸಿದ್ದಾನೆ. ಬಹುಶಃ ಬಾಣನು ಕಾದಂಬರಿಯನ್ನು ಪದ್ಯದಲ್ಲಿ ಬರೆದ ಬಳಿಕ ಗದ್ಯದಲ್ಲಿ ಬರೆದಿರಬಹುದು. ಕ್ಷೇಮೇಂದ್ರನ ಔಚಿತ್ಯ ವಿಚಾರ ಚರ್ಚೆಯಲ್ಲಿ यथा वा पद्य कादम्बर्यां बाणभट्टस्य ಎಂಬ ಉಲ್ಲೇಖದಿಂದ ಇದನ್ನು ಅರಿಯಬಹುದು.

ಬಾಣಭಟ್ಟನ ತಂದೆ ವಾತ್ಸ್ಯಾಯನ ವಂಶದ ಚಿತ್ರಭಾನು. ತಾಯಿ ರಾಜದೇವಿ. ಪ್ರೀತಿ ಕೂಟವು ಅವನ ವಾಸಸ್ಥಾನ. ಚಿಕ್ಕಂದಿನಲ್ಲೇ ಬಾಣ ತಾಯಿಯನ್ನು ಕಳೆದುಕೊಂಡು ತಂದೆಯೇ ಕಡುಕಷ್ಟದಿಂದ ಕಾಪಾಡಿದ. ಕಾದಂಬರಿಯ ಶುಕವೃತ್ತಾಂತವು ಬಾಣನ ಆತ್ಮಚರಿತ್ರೆಯೆಂದು ವಿಮರ್ಶಕರ ಹೇಳಿಕೆ.

ಬಾಣನು ಹರ್ಷನ ಆಸ್ಥಾನ ಕವಿ. ಈತನ ಕಾಲದಲ್ಲೇ ಚೀನಾದೇಶದ ಬೌದ್ಧಯಾತ್ರಿಕ ಹ್ಯೂಯರ್ನ್‌ತ್ಸಾಂಗನು ಭಾರತಕ್ಕೆ ಬಂದುದು. ಹರ್ಷನು ಕ್ರಿ.ಶ. 630ರಲ್ಲಿ ಉತ್ತರಾಪಥಚಕ್ರ ವರ್ತಿಯಾಗಿ ಸ್ಥಾಣೇಶ್ವರದಲ್ಲಿ ಆಳುತ್ತಿದ್ದನು. ಆ ಕಾರಣ ಕವಿಯ ಕಾಲವೂ ಇದೇ. ಆಡು ಮುಟ್ಟದ ಸೊಪ್ಪಾದರೂ ಉಂಟು ಆದರೆ ಬಾಣನ ವರ್ಣನೆಗೆ ಎಟುಕದ ವಿಷಯವೇ ಇಲ್ಲ. ಎಂದೇ बाणोच्छिष्टं जगत्सर्वम् ಎಂಬ ಹೇಳಿಕೆಯುಂಟು. ಅವನ ಶೈಲಿ ಮುಂತಾದುವುಗಳಿಗೆ ಇದೇ ಗ್ರಂಥದ ಸಂಸ್ಕೃತದಲ್ಲಿ ಗದ್ಯಸಾಹಿತ್ಯ ಪರಂಪರೆ ಎಂಬ ಭಾಗವನ್ನು ನೋಡಿ.

**ಪೂರ್ವಕಥೆ:** ವಿದಿಶಾಪಟ್ಟಣದಲ್ಲಿ ಶೂದ್ರಕನೆಂಬ ರಾಜನಿದ್ದನು. ಒಂದು ದಿನ ಆತನ ಆಸ್ಥಾನಕ್ಕೆ ಚಿನ್ನದ ಪಂಜರದಲ್ಲಿ ವೈಶಂಪಾಯನನೆಂಬ ಶುಕವೊಂದನ್ನು ತೆಗೆದುಕೊಂಡು ಬಂದು ಮಾತಂಗ ಕನ್ಯೆಯೊಬ್ಬಳು ರಾಜನಿಗೆ ಅದನ್ನು ಸಮರ್ಪಿಸಿದಳು- ಆ ಗಿಳಿಯು ಬಲ ಗಾಲನ್ನೆತ್ತಿ ರಾಜನಿಗೆ ಗೌರವ ಸೂಚಿಸಿ ಅತಿ ಸ್ಪಷ್ಟವಾದ ವರ್ಣ ಸಂಸ್ಕಾರದಿಂದ ಕೂಡಿದ ವಚನದಿಂದ ಮನುಷ್ಯರಂತೆ ಮಾತನಾಡಿ ಜಯಘೋಷವನ್ನು ಮಾಡಿ ರಾಜನಪರಾಕ್ರಮ ವನ್ನು ಶ್ಲೋಕರೂಪದಲ್ಲಿ ಹಾಡಿ ಹೊಗಳಿತು. ಇದರಿಂದ ಸಂಜಾತ ವಿಸ್ಮಯನಾದ ಮಹಾ ರಾಜನು ಗಿಳಿಯ ವೃತ್ತಾಂತವನ್ನು ವಿಚಾರಿಸಿದನು.

ಶೂದ್ರಕ ಮಹಾರಾಜನು ಹೀಗೆ ಕೇಳಲಾಗಿ ವೈಶಂಪಾಯನ ಗಿಳಿಯು ಈ ಮುಂದೆ ಸಂಗ್ರಹವಾಗಿ ತಿಳಿಸಿರುವಂತೆ ಆತ್ಮವೃತ್ತಾಂತವನ್ನು ಹೇಳತೊಡಗಿತು.

ವಿಂಧ್ಯಾಟವಿಯಲ್ಲಿ ಗೋದಾವರೀ ನದಿಯ ತಟದಲ್ಲಿ ಅಗಸ್ತ್ಯಾಶ್ರಮವಿದೆ. ಅದರ ಪಕ್ಕದಲ್ಲೇ ವಿಶಾಲವಾದ ಪಂಪಾ ಸರೋವರ. ಆ ಮಹಾ ಸರೋವರದ ಪಶ್ಚಿಮತೀರದಲ್ಲಿ ಆ ದಂಡಕಾರಣ್ಯಕ್ಕೇ ಅಧಿಪತಿಯೋ ಎಂಬಂತೆ ಉತ್ತುಂಗವಾದ ಮುದಿ ಬೂರಗ ಮರವೊಂದಿತ್ತು. ಆ ಮರದ ಮೇಲೆ ಅನೇಕ ಗಿಳಿಗಳು ವಾಸವಾಗಿದ್ದುವು. ಅವುಗಳಲ್ಲೊಂದು ಮುದಿಗಿಳಿಯು, ತನ್ನ ಜೊತೆಗಾತಿ ಹೆಣ್ಣುಗಿಳಿಯು ಮರಿಯೊಂದನ್ನು ಪ್ರಸವಿಸಿ (ಇದೇ ವೈಶಂಪಾಯನಶುಕ) ಆ ಪ್ರಸವ ವೇದನೆಯಲ್ಲೇ ಸಾಯಲು, ವೃದ್ಧಾವಸ್ಥೆಯಲ್ಲಿ ಹುಟ್ಟಿದ ತಬ್ಬಲಿ ಮರಿಯ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಾಯಿತು. ರೆಕ್ಕೆ ಪುಕ್ಕಗಳೆಲ್ಲಾ ಉದುರಿ ಮುದಿಯಾಗಿದ್ದ ಆ ಗಿಳಿಯು ಹಾರಲಾರದೆ ಮರದ ಪೊಟರೆಯಲ್ಲೇ ಇದ್ದುಕೊಂಡು ಇತರ ಗಿಳಿಗಳು ತಂದು ತಿಂದು ತಿರಸ್ಕರಿಸಿದ ಹಣ್ಣು ಹಂಪಲ ಚೂರುಪಾರುಗಳಿಂದಲೇ ತನ್ನ ಮರಿಯನ್ನೂ ತನ್ನನ್ನೂ ಪ್ರಾಣದಿಂದ ಉಳಿಸಿಕೊಂಡು ಕಾಲಯಾಪನೆಮಾಡುತ್ತಿತ್ತು.

ಹೀಗಿರುವಾಗ ಒಂದು ದಿನ ಬೇಟೆಗಾರರ ತಂಡವೊಂದು ಮಹಾಕೋಲಾಹಲ ಧ್ವನಿಯಿಂದ ಆ ಮಹಾರಣ್ಯವನ್ನೇ ನಡುಗಿಸುತ್ತಾ ಬಿಸಿಲೇರಲು ವಿಶ್ರಮಿಸಿಕೊಳ್ಳುವುದಕ್ಕಾಗಿ ಈ ಮಹಾ ಬೂರುಗ ವೃಕ್ಷದಡಿಗೆ ಬಂದು ಸ್ವಲ್ಪಕಾಲ ದಣಿವಾರಿಸಿಕೊಂಡು ಮುಂದೆ ಸಾಗಿತು. ಆದರೆ ಆ ತಂಡದಲ್ಲಿದ್ದ ಜರಚ್ಛಬರನೊಬ್ಬ ಮರದ ಮೇಲೆ ದೃಷ್ಟಿ ಹಾಯಿಸಿ ಅಲ್ಲಿದ್ದ ಗಿಳಿ ಮರಿಗಳ ಶಬ್ದವನ್ನು ಕೇಳಿ ಮರವನ್ನೇರಿದನು. ಮುದಿ ಕಾಳಿಂಗನಾಗರ ಹಾವಿನಂತಿದ್ದ ತನ್ನ ಕಠೋರ ಬಾಹುವನ್ನು ಪೊಟರೆ ಪೊಟರೆಗಳಿಗೂ ಸಹ ತೂರಿಸಿ, ಇನ್ನೂ ರೆಕ್ಕೆಗಳು ಬೆಳೆಯದಿದ್ದುದರಿಂದ ಆ ಮಹಾಶಾಲ್ಮಲೀ ವೃಕ್ಷದ ಹೂಗಳೋ ಎಂಬಂತಿದ್ದ ಆ ಶುಕಶಿಶುಗಳ ಕತ್ತನ್ನು ತಿರಿಚಿ ತಿರಿಚಿ ಕೊಂದು ಅವುಗಳನ್ನು ಕೆಳಗೆ ಬಿಸುಡಿದನು. ಎರಗಿಬಂದ ಈ ಉಪಪ್ಲವವನ್ನು ಕಂಡ ಮುದಿಗಿಳಿಯು ಅದಕ್ಕೆ ಪ್ರತೀಕಾರಮಾಡಲಾರದೆ ತನ್ನ ಕಿಶೋರಕವನ್ನು ಜೀರ್ಣವಾಗಿದ್ದ ರೆಕ್ಕೆಗಳೊಳಗೆ ಮುಚ್ಚಿಕೊಂಡು ನಡುನಡುಗುತ್ತಾ ಆ ಕರಾಳಬಾಹುವಿನ ಪ್ರತೀಕ್ಷೆಯಲ್ಲೇ ಮುದುರಿಕೊಂಡು ಕುಳಿತಿತ್ತು. ಯಮ ಸ್ವರೂಪಿಯಾದ ಆ ಮುದಿಬೇಡನು ಆ ಮುದಿಗಿಳಿಯನ್ನು ಪೊಟರೆಯಿಂದ ಹೊರಗೆಳೆದು ಕತ್ತು ತಿರಿಚಿ ಮರಣಕಾಲದಲ್ಲಿ ಅದು ಮಾಡಿದ ನಿಸ್ಸಹಾಯ ಚೀತ್ಕಾರ ಧ್ವನಿಯಿಂದ ಯತ್ಕಿಂಚಿತ್ತು ಮರುಗದೆ, ಕೊಂದುಹಾಕಿ ಕೆಳಗೆಸೆದನು. ಆದರ ರೆಕ್ಕೆಯೊಳಗಿದ್ದ ಮರಿಯಾದರೋ ಮರಣಾಪಾಯದಿಂದ ಪಾರಾಗಿ ಅದೃಷ್ಟವಶಾತ್ ತರಗೆಲೆಯ ರಾಶಿಯ ಮೇಲೆ ಬಿದ್ದು ಅಲ್ಲಿಂದ ಹೇಗೋ ತೆವಳಿಕೊಂಡು ಹತ್ತಿರದಲ್ಲಿದ್ದ ತಮಾಲವೃಕ್ಷದಡಿಯಲ್ಲಿ ಗುಪ್ತವಾಗಿ ಪ್ರಾಣ ಉಳಿಸಿಕೊಂಡಿತು. ಮುದಿ ಬೇಡನು ಕೆಳಗಿಳಿದು ಆ ಮುದಿಗಿಳಿಯನ್ನೂ ಇತರ ಮರಿಗಳನ್ನು ಬಳ್ಳಿಗಳಿಂದ ಸರದಂತೆ ಕಟ್ಟಿಕೊಂಡು ಹೊರಟು ಹೋಗಲು ವೈಶಂಪಾಯನ ಶುಕವು ಮೇಲಿಂದ ಬಿದ್ದ ಏಟನಿಂದಲೂ ಮಧ್ಯಾಹ್ನದ ತೀವ್ರತಾಪದಿಂದಲೂ ಬಳಲಿ ನೀರಿಗಾಗಿ ಬಾಯಿಬಾಯಿ ಬಿಡುತ್ತಾ ಹಾರಲಾರದೆ ಅತ್ತಿತ್ತ ಹೊರಳಾಡುತ್ತಾ ಮರಣಾವಸ್ಥೆಯಲ್ಲಿತ್ತು.

ಈ ವೇಳೆಗೆ ಸರಿಯಾಗಿ ಆ ಸರೋವರಕ್ಕೆ ನಾತಿದೂರದಲ್ಲಿದ್ದ ಜಾಬಾಲಿ ಮಹರ್ಷಿಗಳ ತಪೋವನದಿಂದ ಅವರ ಕುಮಾರಕ ಹಾರೀತನೆಂಬುವನು ಇತರ ಮುನಿ ಕುಮಾರರೊಡನೆ ಮಧ್ಯಾಹ್ನದ ಸ್ನಾನಕ್ಕಾಗಿ ಅದೇ ಸರೋವರಕ್ಕೆ ಬರುತ್ತಿದ್ದವನು ಗಿಳಿಮರಿಯನ್ನು ಕಂಡು ಅದಕ್ಕೆ ನೀರು ಕುಡಿಸಿ ಆಶ್ರಮಕ್ಕೆ ಒಯ್ದು ತಂದೆಯ ಮುಂದಿಟ್ಟನು. ಕಾಲತ್ರಯ ದರ್ಶಿಗಳಾದ ಆ ತಪೋಧನರು ತಮ್ಮ ತಪಃ ಪ್ರಭಾವದ ದಿವ್ಯ ಚಕ್ಷುವಿನಿಂದ ಆ ವೈಶಂಪಾಯನ ಗಿಳಿಯ ಪೂರ್ವಾಪರ ಚರಿತ್ರೆಯೆಲ್ಲವನ್ನೂ ಸಾಕ್ಷಾತ್ಕರಿಸಿಕೊಂಡು ತನ್ನ ಅವಿನಯದ ಫಲವನ್ನು ಅನುಭವಿಸುತ್ತಿದೆ ಎಂದರು. ಅದರಿಂದ ಕುತೂಹಲ ಕೆರಳಿದ ತಾಪಸರೆಲ್ಲರೂ ಅದರ ಅವಿನಯ ಅದಕ್ಕೆ ಕಾರಣ ಹಾಗೂ ಅದರ ಪೂರ್ವಜನ್ಮವೃತ್ತಾಂತವನ್ನು ತಿಳಿಸಬೇಕೆಂದು ಪ್ರಾರ್ಥಿಸಲಾಗಿ ಆ ಮಹರ್ಷಿಗಳು ಆ ದಿನ ರಾತ್ರಿ ಬೆಳುದಿಂಗಳಲ್ಲಿ ಕುಳಿತು ಆ ಶುಕ ಶಿಶುವಿನೆದುರಲ್ಲೇ ಅದರ ಪೂರ್ವ ಜನ್ಮವೃತ್ತಾಂತವನ್ನು ಈ ಮುಂದಿನ ರೀತಿಯಲ್ಲಿ ವರ್ಣಿಸಿದರು.

ಉಜ್ಜಯಿನಿಯೆಂಬ ಪಟ್ಟಣದಲ್ಲಿ ತಾರಾಪೀಡನೆಂಬ ರಾಜನಿದ್ದನು. ಮಹಾರಾಜನೀತಿಜ್ಞನಾದ ಶುಕನಾಸನೆಂಬುವನು ಅವನ ಮಂತ್ರಿ. ತಾರಾಪೀಡನ ಪಟ್ಟಮಹಿಷಿ ವಿಲಾಸವತಿ. ರಾಜನಿಗೂ ಮಂತ್ರಿಗೂ ಬಹಳಕಾಲ ಮಕ್ಕಳಾಗಲಿಲ್ಲ. ಈ ದುಃಖದಿಂದಲೇ ದಿನಗಳು ಉರುಳುತ್ತಿರುವಲ್ಲಿ ಒಂದು ದಿನ ರಾತ್ರಿ ಮಹಾರಾಜನು ತನ್ನ ಕನಸಿನಲ್ಲಿ ಪಟ್ಟಮಹಿಷಿ ವಿಲಾಸವತಿಯ ಮುಖದೊಳಕ್ಕೆ ಚಂದ್ರನು ಪ್ರವೇಶಿಸುತ್ತಿರುವಂತೆ ಕಂಡನು. ಆ ಶುಭ ಸ್ವಪ್ನ ವಿಚಾರವನ್ನು ತನ್ನ ಪ್ರಿಯ ಅಮಾತ್ಯ ಶುಕನಾಸನಿಗೆ ಅರುಹಲು, ಮಕ್ಕಳಿಲ್ಲದಿದ್ದ ಆತನೂ ಸಹ ಆ ರಾತ್ರಿ ತನ್ನ ಕನಸಿನಲ್ಲಿ ದಿವ್ಯಾಕೃತಿಯ ದ್ವಿಜನೊಬ್ಬನು ವಿಕಸಿತ ಪುಂಡರೀಕವೊಂದನ್ನು ತನ್ನ ಪತ್ನಿ ಮನೋರಮೆಯ ಅಂಕದಲ್ಲಿರಿಸಿದುದನ್ನು ಕಂಡೆನೆಂದು ರಾಜನಿಗೆ ತಿಳಿಸಲು, ಈರ್ವರೂ ಸಹ ಪರಸ್ಪರ ಆನಂದದಿಂದ ಪುತ್ರೋತ್ಸವದ ಶುಭ ದಿನಕ್ಕಾಗಿ ಹಾತೊರೆಯುತ್ತಿದ್ದರು.

ಹೀಗಿರಲು ಕಾಲಾಂತರದಲ್ಲಿ ವಿಲಾಸವತಿಯು ಪುತ್ರರತ್ನವೊಂದಕ್ಕೆ ಜನ್ಮವಿತ್ತಳು. ಚಂದ್ರಪ್ರವೇಶದ ಶುಭ ಸನ್ನಿವೇಶವನ್ನು ಸ್ಮರಿಸಿಕೊಂಡ ಮಹಾರಾಜನು ಆ ಮಗುವಿಗೆ 'ಚಂದ್ರಾಪೀಡ'ನೆಂದು ಹೆಸರಿಟ್ಟನು. ಶುಕನಾಸನ ಪತ್ನಿ ಮನೋರಮೆಯೂ ಸಹ ಅದೇ ಕಾಲದಲ್ಲಿ ಗಂಡುಮಗುವೊಂದನ್ನು ಪ್ರಸವಿಸಿದಳು. ಆ ಮಗುವಿಗೆ ವೈಶಂಪಾಯನನೆಂದು ನಾಮಕರಣ ಮಾಡಿದರು.

ಮಹಾರಾಜ ಹಾಗೂ ಮಹಾಮಂತ್ರಿಯ ಪುತ್ರರಿಬ್ಬರೂ ಶುಕ್ಲ ಪಕ್ಷದ ಚಂದ್ರರಂತೆ ತೇಜಃಪೂರ್ಣರಾಗಿ ಬೆಳೆದರು. ಉಚಿತ ಕಾಲದಲ್ಲಿ ಅವರೀರ್ವರಿಗೂ ಉಪನಯನವಾಗಿ ವಿದ್ಯಾಭ್ಯಾಸಕ್ಕಾಗಿ ಗುರುಕುಲ ಪ್ರವೇಶಿಸಿದರು. ಅಲ್ಲಿ ತಮ್ಮ ತಮ್ಮ ವೃತ್ತಿಗೆ ಅನುರೂಪವಾದ ಸಕಲ ವಿದ್ಯೆಗಳಲ್ಲೂ ಪರಿಣತರಾಗಿ ನವಯುವಕರಾಗಿ ಗುರುಕುಲದಿಂದ ಮರಳಿದರು. ಪ್ರಾಪ್ತಯೌವನನಾಗಿದ್ದ ಚಂದ್ರಾಪೀಡನಿಗೆ ಯುವರಾಜ್ಯ ಪಟ್ಟಾಭಿಷೇಕವಾಗಬೇಕೆಂದು ಪರ್ಯಾಲೋಚಿಸಿ ರಾಜನು ತೀರ್ಮಾನಿಸಿ ಅದಕ್ಕೆ ಸಕಲ ಸನ್ನಾಹಮಾಡಿಸುತ್ತಿದ್ದನು.

ಈ ಮಧ್ಯೆ ಒಂದು ದಿನ ಚಂದ್ರಾಪೀಡನು ಶುಕನಾಸನ ದರ್ಶನಾಕಾಂಕ್ಷಿಯಾಗಿ ಬರಲು ಆತನು ಚಂದ್ರಾಪೀಡನಿಗೆ ಯೌವನ, ಸೌಂದರ್ಯ, ಹಾಗೂ ರಾಜವೈಭವದ ದುರುಪಯೋಗ ದಲ್ಲಡಗಿರುವ ದೋಷಗಳು ಆಸ್ಥಾನದಲ್ಲಿರುವ ಪಿಶುನರ ವಂಚನಾಬುದ್ಧಿ, ಅದರಿಂದಾಗುವ ಹಾನಿ ಗಳು ಮುಂತಾದುವನ್ನು ವಿವರಿಸಿ, ಎಚ್ಚರಿಸಿ, ವಿನೀತನಾಗಿದ್ದರೂ ವಿನೀತತರನಾತನಾಗ ಬೇಕೆಂದು ಬಯಸಿ ಸವಿಸ್ತರವಾಗಿ ಉಪದೇಶಮಾಡಿದನು.

ಈ ಮುಂದೆ ಕೊಟ್ಟಿರುವ ಶುಕನಾಸೋಪದೇಶಭಾಗವು ಬಾಣಭಟ್ಟನ ಮೂಲ ಕಾದಂಬರೀ ಗ್ರಂಥದಲ್ಲಿ ಬಹುಸುಂದರವಾಗಿ ಬಂದಿದೆ. ಇದು ಪ್ರಪಂಚದ ಯಾವುದೇ ರಾಜಧರ್ಮ (ರಾಜನೀತಿ) ಸಾಹಿತ್ಯದ ಮಕುಟಮಣಿಪ್ರಾಯವಾದುದು. ಇಲ್ಲಿರುವ ಒಂದೊಂದು ವಾಕ್ಯವೂ ಒಂದೊಂದು ಆಣಿಮುತ್ತು. ಒಂದೊಂದೂ ಒಂದೊಂದು ಸುಭಾಷಿತ; ಅನುಭವದ ಅಗ್ಗಿಷ್ಟಿಕೆಯಲ್ಲಿ ಪುಟ ಗೊಂಡ ನಿರ್ಮಲ ಅಪರಂಜಿ.

ಬಾಣಭಟ್ಟನ ಮೂಲಕಾದಂಬರಿಯನ್ನು ಮಹಾಮಹೋಪಾಧ್ಯಾಯ, ಪಂಡಿತರಾಜ ಮತ್ತು ಅಭಿನವ ಭಟ್ಟಬಾಣ ಇತ್ಯಾದಿ ಪ್ರಶಂಸಾರ್ಹರಾಗಿದ್ದ ಆರ್. ವಿ. ಕೃಷ್ಣಮಾಚಾರ್ಯರ್ ಅವರು ಬಾಣನ ಶಬ್ದಗಳನ್ನೇ ಸೆರೆಹಿಡಿದು ಅದೇ ಶೈಲಿಯನ್ನು ಸುಲಭಗೊಳಿಸಿ ಸಂಗ್ರಹಿಸಿ ಬಾಣನ ಮಹಾಗದ್ಯಗ್ರಂಥ ಪ್ರವೇಶಮಾಡುವವರಿಗೆ ಉಪಕಾರಮಾಡಿದ್ದಾರೆ. ಈ ಮುಂದಿನ ಭಾಗವನ್ನು ಅವರ 'ಕಾದಂಬರೀ ಸಂಗ್ರಹ'ವೆಂಬ ಗ್ರಂಥದಿಂದ ಆರಿಸಲಾಗಿದೆ.

---

श्रीः

# कादम्बरी सङ्ग्रहे

## शुकनासोपदेशः

एवं समतिक्रामत्सु केषुचिद्दिनेषु, राजा चन्द्रापीडस्य यौवराज्याभिषेकं चिकीर्षुः प्रतीहारानुपकरणसंभार-सङ्ग्रहार्थमादिदेश ॥

समुपस्थितयौवराज्याभिषेकं च तं कदाचिद्दर्शनार्थमागतमारूढविनयमपि विनीततरमिच्छञ्शुकनासः सविस्तरमुवाच —" तात चन्द्रापीड, विदितवेदितव्यस्याधीतसर्वशास्त्रस्य ते नाल्पमप्युपदेष्टव्यमस्ति । केवलं च निसर्गत एवाभानुभेद्यम् अप्रदीपप्रभापनेयम् अतिगहनं तमो यौवनप्रभवम् । अपरिणामोपशमो दारुणो

लक्ष्मीमदः । कष्टमनञ्जनवर्तिसाध्यमपरमैश्वर्यतिमिरान्धत्वमित्यतो विस्तरेणाभिधीयसे। गर्भेश्वरत्वम्, अभिनवयौवनत्वम्, अप्रतिमरूपत्वम्, अमानुषशक्तित्वं चेति महतीयं खल्वनर्थपरम्परा।

सर्वाविनयानामेकैकमप्येषामायतनम्; किमुत समवायः। यौवनारम्भे च प्रायः शास्त्रजलप्रक्षालननिर्मलापि कालुष्यतामुपयाति बुद्धिः। अपहरति च वात्येव शुष्कपत्रं समुद्भूतरजोभ्रान्तिरतिदूरमात्मेच्छया यौवनसमये पुरुषं प्रकृतिः। नाशयति च दिङ्मोह इवोन्मार्गप्रवर्तकः पुरुषमत्यासङ्गो विषयेषु। भवादृशा एव भवन्ति भाजनान्युपदेशानाम्। अपगतमले हि मनसि, स्फटिकमणाविव रजनिकरगभस्तयो विशन्ति सुखमुपदेशगुणाः। गुरुवचनममलमपि सलिलमिव महदुपजनयति श्रवणस्थितं शूलमभव्यस्य। इतरस्य तु करिण इव शङ्खाभरण माननशोभासमुदयमधिकतरमुपजनयति। हरति च सकलमलिनमप्यन्धकारमिव दोषजातं प्रदोषसमयनिशाकर इव गुरूपदेशः। अयमेव चानास्वादितविषयरसस्य ते काल उपदेशस्य। कुसुमशरशरप्रहारजर्जरिते हि हृदये जलमिव गलत्युपदिष्टम्। अकारणं च भवति दुष्प्रकृतेरन्वयः श्रुतं वा विनयस्य। चन्दनप्रभवो न दहति किमनलः? किंवा प्रशमहेतुनापि न प्रचण्डतरीभवति वडवानलो वारिणाम्। गुरूपदेशश्च नाम पुरुषाणामखिलप्रक्षालनक्षममजलं स्नानम्, अनुपजातपलितादि वैरूप्यमजरं वृद्धत्वम्, असुवर्णविरचनमग्राम्यं कर्णाभरणम्। विशेषेण तु राज्ञाम्। विरला हि तेषामुपदेष्टारः। प्रतिशब्दक इव राजवचनमनुगच्छति जनो भयात्। उद्दामदर्पश्वयथुस्थगितश्रवणविवराश्चोपदिश्यमानमपि ते न शृण्वन्ति। शृण्वन्तोऽपि च गजनिमीलितेनावधीरयन्तः, खेदयन्ति हितोपदेशदायिनो गुरून्। अहङ्कारदाहज्वरमूर्च्छान्धकारिता विह्वला हि राजप्रकृतिः॥

आलोकयतु तावत्कल्याणाभिनिवेशी लक्ष्मीमेव प्रथमम्। इयं हि लक्ष्मीः क्षीरसागरात् इन्दुशकलादेकान्तवक्रताम्, उच्चैःश्रवसश्चञ्चलताम्, कालकूटान्मोहन-

शक्तिम्, मदिराया मदम्, कौस्तुभमणेरतिनैष्ठुर्यम् इत्येतानि सहवासपरिचयवशाद्विरहविनोदचिह्नानि गृहीत्वैवोद्गता। न ह्येवंविधमपरमपरिचितमिह जगति किंचिदस्ति यथेयमनार्या लब्धापि खलु दुःखेन परिपाल्यते। दृढगुणपाशसन्दाननिःस्पन्दीकृतापि नश्यति न परिचयं रक्षति। नाभिजनमीक्षते। नकुलक्रममनुवर्तते न शीलं पश्यति। न श्रुतमाकर्णयति। न धर्ममनुरुध्यते। न त्यागमाद्रियते। न विशेषज्ञतां विचारयति। गन्धर्वनगरलेखेव पश्यत एव नश्यति। अद्याप्यारूढमन्दरपरिवर्तभ्रान्ति जनितसंस्कारेव परिभ्रमति। पारुष्यमिवोपशिक्षितुमसिधारासु निवसति। दिवसकरगतिरिव प्रकटितविविधसंक्रान्तिः। पातालगुहेव तमोबहुला। प्रावृडिवाचिरद्युतिकारिणी स्वल्पसत्त्वमुन्मत्तीकरोति। सरस्वती परिगृहीतमीर्ष्ययेव नालिङ्गति जनम्। गुणवन्तमपवित्रमिव न बहुमन्यते। सुजनमनिमित्तमिव न पश्यति। अभिजातमहिमिव लङ्घयति। शूरं कण्टकमिव परिहरति। दातारं दुःस्वप्नमिव न स्मरति। विनीतं पातकिनमिव नोपसर्पति। मनस्विनमुन्मत्तमिवोपहसति।

यथा यथा चेयं चपला दीप्यते, तथा तथा दीपशिखेव कज्जलमलिनमेव कर्म केवलमुद्वमति। तथाहि—इयं संवर्धनवारिधारा तृष्णाविषवल्लीनाम्, व्याधगीतिरिवेन्द्रियमृगाणाम्, परमार्शधूमलेखा सच्चरित्राणाम्, विभ्रमशय्या मोहदीर्घनिद्राणाम्, आवासदरीदोषाशीविषाणाम्, अकालप्रावृट् गुणकलहंसकानाम्, प्रस्तावना कपटनाटकस्य, राहुजिह्वा धर्मेन्दुमण्डलस्य।

नहि तं पश्यामि यो ह्यपरिचितयानया न निर्भरमुपगूढः, यो वा न विप्रलब्धः। नियतमियमालेख्यगतापि चलति श्रुताप्यतिसन्धत्ते, चिन्तितापि वञ्चयति। एवं विधयापि चानया दुराचारया कथमपि दैववशेन परिगृहीता विक्लवा भवन्ति राजानः सर्वाविनयाधिष्ठानतां च गच्छन्ति। तथाहि—अभिषेकसमय एवैषां मङ्गलकलशजलैरिव प्रक्षाल्यते दाक्षिण्यम्। अग्निकार्यधूमेनेव मलिनीभवति हृदयम्। उष्णीषपट्टबन्धेनेवाच्छाद्यते जरागमनस्मरणम्। आतपत्रमण्डलेनेवापवार्यते परलोकदर्शनम्।

चामरपवनैरिवापह्रियते सत्यवादिता। वेत्रदण्डैरिवोत्सार्यन्ते गुणाः। तथाहि —केचिद्धनलवलाभावलेपविस्मृतजन्मानः, विविधविषयग्रासलालसैः पञ्चभिरप्यनेक-सहस्रसङ्ख्यैरिवेन्द्रियैरायास्यमाना, प्रकृतिचञ्चलतया लब्धप्रसरेणैकेनापि शत-सहस्रतामिवोपगतेन मनसाकुलीक्रियमाणा विह्वलतामुपयान्ति। घनोष्मणा पच्यमाना इव विचेष्टन्ते। गाढप्रहाराहता इवाङ्गानि न धारयन्ति। कुलीरा इव तिर्यक्परिभ्रमन्ति। अधर्मभग्नगतयः पङ्गव इव परेण सञ्चार्यन्ते। मृषा-वादविपाकसंजात मुखरोगा इवातिकृच्छ्रेण जल्पन्ति। आसन्नमृत्यव इव बन्धु-जनमपि नाभिजानन्ति। उत्कुपितलोचना इव तेजस्विनो नेक्षन्ते। कालदष्टा इव महामन्त्रैरपि न प्रतिबुध्यन्ते। तृष्णाविषमूर्च्छिताः कनकमयमिव सर्वं पश्यन्ति। इषव इव पानवर्धिततैक्ष्ण्याः परप्रेरिता विनाशयन्ति। श्मशानाग्नयः इवातिरौद्रमूर्तयः। श्रूयमाणा अपि प्रेतपटहा इवोद्वेजयन्ति। चिन्त्यमाना अपि महापातकाध्यवसाया इवोपद्रवमुपजनयन्ति। अनुदिवसमापूर्यमाणाः पापेनेवाध्मात-मूर्तयो भवन्ति। तदवस्थाश्च वल्मीकतृणाग्रावस्थिता जलबिन्दव इव पतितमप्या-त्मानं नावगच्छन्ति।

अपरे तु स्वार्थनिष्पादनपरैर्धनपिशितग्रासगृध्रैरास्थाननलिनीधूर्तबकैः द्यूतं, विनोद इति, मृगया श्रम इति, पानं विलास इति, गुरुवचनावधीरणम् अपरप्रणेयत्व-मिति, परिभवसहत्वं क्षमेति, स्वच्छन्दता प्रभुत्वमिति, देवावमाननं महासत्त्वतेति तरलता उत्साह इति, दोषानपि गुणपक्षमध्यारोपयद्भिरन्तः स्वयमपि विहसद्भिः प्रतारणकुशलैर्धूर्तैरमानुषोचिताभिः स्तुतिभिः प्रतार्यमाणाः वित्तमदमत्तचित्ताः, निश्चे-तनतया तथैवेत्यात्मन्यारोपितालीकाभिमानाः, मर्त्यधर्माणोऽपि दिव्यांशावतीर्णमिव सदैवतमिवातिमानुषमात्मानमुत्प्रेक्षमाणाः, प्रारब्धदिव्योचितचेष्टानुभावाः सर्वजनस्यो-पहास्यतामुपयान्ति। आत्मविडम्बनां चानुजीविना जनेन क्रियमाणमभिनन्दन्ति। मनसा देवताध्यारोपणप्रतारणादन्तः प्रविष्टापरभुजद्वयमिवात्मबाहुयुगलं संभावयन्ति। त्वगन्तरिततृतीयलोचनं स्वललाटमाशङ्कन्ते। दर्शनप्रदानमप्यनुग्रहं गणयन्ति।

दृष्टिपातमप्युपकारपक्षे स्थापयन्ति। संभाषणमपि संविभागमध्ये कुर्वन्ति। आज्ञामपि वरप्रदानं मन्यन्ते। स्पर्शमपि पावनमाकलयन्ति। मिथ्यामाहात्म्यगर्वनिर्भराश्च न प्रणमन्ति देवताभ्यः। न पूजयन्ति द्विजातीन्। न मानयन्ति मान्यान्। नाभ्युत्तिष्ठन्ति गुरून्। अनर्थकायासान्तरितविषयोपभोग इत्युपहसन्ति विद्वज्जनम्। जरावैक्लव्यप्रलपितमिति पश्यन्ति वृद्धजनोपदेशम्। आत्मप्रज्ञापरिभव इत्यसूयन्ति सचिवोपदेशाय। कुप्यन्ति हितवादिने। सर्वथा तमभिनन्दन्ति, तमालपन्ति, तं पार्श्वे कुर्वन्ति, तेन सह सुखमवतिष्ठन्ते, तस्य वचनं शृण्वन्ति, तत्र वर्षन्ति, योऽहर्निशमनवरतमुपरचिताञ्जलिरधिदैवतमिव विगतान्यकर्तव्यः स्तौति, यो वा माहात्म्यमुद्भावयति।

किं वा तेषां सांप्रतम्, येषामतिनृशंसप्रायोपदेशनिर्घृणं कौटिल्यशास्त्रं प्रमाणम्, अभिचारक्रियाक्रूरैकप्रकृतयः पुरोधसो गुरवः, परातिसन्धानपरा मन्त्रिण उपदेष्टारः सहजप्रेमार्द्रहृदयानुरक्ता भ्रातर उच्छेद्याः।

तदेवं प्रायेऽतिकुटिलकष्टचेष्टचेष्टासहस्रदारुणे राज्यतन्त्रेऽस्मिन्, महामोहकारिणि च यौवने, कुमार! तथा प्रयतेथाः यथा नोपहस्यसे जनैः, न निन्द्यसे साधुभिः, न धिक्क्रियसे गुरुभिः, नोपालभ्यसे सुहृद्भिः, न शोच्यसे विद्वद्भिः। यथा च न प्रहस्यसे विटैः, न प्रसार्यसे कुशलैः, नावलुप्यसे सेवकवृकैः, न प्रलोभ्यसे वनिताभिः, नापह्रियसे सुखेन। कामं भवान् प्रकृत्यैव धीरः, पित्रा च महता प्रयत्नेन समारोपितसंस्कारः। तरलहृदयमप्रतिबुद्धं च मदयन्ति धनानि। तथापि भवद्गुणसन्तोषो मामेवं मुखरीकृतवान्। इदमेव च पुनः पुनरभिधीयसे—विद्वांसमपि सचेतनमपि महासत्त्वमप्यभिजातमपि धीरमपि प्रयत्नवन्तमपि पुरुषमियं दुर्विनीता खलीकरोति लक्ष्मीरिति। सर्वथा कल्याणैः पित्रा क्रियमाणमनुभवतु भवान्यौवराज्याभिषेकमङ्गलम्। कुलक्रमागतामुद्वह पूर्वपुरुषैरूढां धुरम्। अवनमय षतां शिरांसि। उन्नमय बन्धुवर्गम्। अभिषेकानन्तरं च प्रारब्धदिग्विजयः

परिभ्रमन् विजितामपि तव पित्रा सप्तद्वीपभूषणां पुनर्विजयस्व वसुन्धराम्। अपि च ते कालः प्रतापमारोपयितुम्। आरूढप्रतापो हि राजा त्रैलोक्यदर्शीव सिद्धादेशो भवति" इत्येतावदभिधायोपशशाम।

उपशान्तवचसि शुकनासे, चन्द्रापीडस्ताभिरमलाभिरुपदेशवाग्भिः प्रक्षालित इवोन्मूलित इव पवित्रीकृत इवोद्भासित इव प्रीतहृदयो मुहूर्तं स्थित्वा स्वभवन-माजगाम ॥

---

दर्शनाय—दर्शनार्थं
समवायः—ಸಮುದಾಯ
वातानां समूहः वात्या
रजः—ಧೂಳು, ರಜೋಗುಣ
आसङ्गः—ಸಂಬಂಧ
गभस्तिः—ಕಿರಣ
दोषजातम्—ಅವಗುಣದ ಸಮೂಹ, ರಾತ್ರಿಸಮೂಹ
पलितम्—ನರೆಗೂದಲು
प्रतिशब्दकः—ಪ್ರತಿಧ್ವನಿ
गुणपाशः—ಗುಣ ಶಬ್ದಕ್ಕೆ ಗುಣ, ಹುರಿ ಎರಡೂ ಅರ್ಥ
अचिरद्युतिकारिणी—ಕ್ಷಣಕಾಲ ಬೆಳಗತಕ್ಕದ್ದು
कज्जलम्—ಕಿಟ್ಟ, ಕಾಡಿಗೆ
अकालप्रावृट्—ಅಕಾಲದ ಮಳೆಗಾಲ
विप्रलब्ध—ಮೋಸಗೊಳಿಸಲ್ಪಟ್ಟವನು
आलेख्यं—ಚಿತ್ರ
उष्णीषा—ರುಮಾಲು
कुलीर—ಏಡಿ, ನಳ್ಳಿ
उत्कुपितलोचनः—ಕಣ್ಣು ಬೇನೆ ಬಂದವನು
आध्मातमूर्तयः—ಉಬ್ಬಿದ ಶರೀರವುಳ್ಳವರು
पिशितम्—ಮಾಂಸ
मृगया—ಬೇಟೆ

प्रतारणकुशलैः—ವಂಚನಾಚತುರರಾದ

अलीकाभिमानाः—ಗರ್ವದ ಸೋಗುಳ್ಳವರಾಗಿ

असूयन्ति सचिवोपदेशाय, हितवादिने कुप्यन्ति ವ್ಯಾ.ವಿ. "क्रुधद्रुहेर्ष्यासूयार्थानां यं प्रति कोपः" ಎಂಬುದರಿಂದ ಚತುರ್ಥೀ

कौटिल्यशास्त्रम्—ಕೌಟಲ್ಯನ ಅರ್ಥಶಾಸ್ತ್ರ

प्रमाणम्—ಪ್ರಮಾಣ ಶಬ್ದವು ವಿಧೇಯ ವಾಚಕವಾದಾಗ ನಪುಂಸಕೈಕವಚದಲ್ಲೇ ಇರುತ್ತದೆ,

मुखरीकृतवान्—ಮಾತನಾಡಿಸಿತು

धुरम्—ಭಾರವನ್ನು

विजयस्व वसुन्धरम्—ವ್ಯಾ.ವಿ. ''विपराभ्यांजेः'' ಎಂಬುದರಿಂದ ಆತ್ಮನೇ ಪದ

आरोपयितुम्—ತೋರಿಸಲು

आदेशः—ಅಪ್ಪಣೆ

ಅಭ್ಯಾಸ—

1. महतीयम् अनर्थपरम्परा—ಯಾವುದು ? ಯೌವನದಿಂದ ಜರಗುವ ಅಪರಾಧಗಳಾವುವು ?
2. ಲಕ್ಷ್ಮಿಯು ಯಾವು ? ಯಾರಿಂದ ಯಾವ ಯಾವ ದುರ್ಗುಣಗಳನ್ನು ಕಲಿತಿದ್ದಾಳೇ ?
3. ಐಶ್ವರ್ಯದಿಂದಾಗುವ ಅನರ್ಥಗಳನ್ನು ಸಂಗ್ರಹಿಸಿ
4. ಲಕ್ಷ್ಮಿಯ ಸಂಪರ್ಕದಿಂದ ರಾಜರಲ್ಲಿ ಆಗುವ ಬದಲಾವಣೆಗಳಾವುವು ?
5. ರಾಜನನ್ನು ಆಶ್ರಯಿಸಿದ ದೂರ್ತರು ರಾಜನನ್ನು ಹೇಗೆ ಹೇಗೆ ಕೆಡಿಸುತ್ತಾರೆ ?

# ಯದುವಂಶ ಚರಿತ್ರಂ-ಯದುವಂಶ ರಾಜ್ಯಪ್ರಾಪ್ತಿಃ

## ಜಗ್ಗು ವಕುಲಭೂಷಣರು

ಸಂಸ್ಕೃತದ ಆಧುನಿಕ ಕವಿಗಳಲ್ಲಿ ಜಗ್ಗು, ವಕುಳಭೂಷಣರು ಅಗ್ರಗಣ್ಯರು. ಮೇಲುಕೋಟೆ ಅವರ ಜನ್ಮಭೂಮಿ. ಅವರದು ವಿದ್ಯತ್ಪರಂಪರೆ. ಅವರ ಪೂರ್ವಜರೆಲ್ಲರೂ ಕವಿಗಳೇ. ಮೇಲುಕೋಟೆಯ ಸಂಸ್ಕೃತ ಮಹಾಪಾಠಶಾಲೆ ಉಪಾಧ್ಯಾಯರಾಗಿದ್ದು ಅನೇಕ ವರ್ಷಗಳು ಸೇವೆಸಲ್ಲಿಸಿದ್ದಾರೆ. ಸದ್ಯಕ್ಕೆ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಇವರಿಗೆ 2ದೆವರಾಜಬಹದ್ದೂರ್ ಪಾರಿತೋಷಕವೂ ದೊರಕಿದೆ. ಕಾವ್ಯ, ನಾಟಕ, ಚಂಪೂ. ಗದ್ಯಗ್ರಂಥರಚನೆಯಲ್ಲಿ ಇವರು ನುರಿತವರು.

ಅದ್ಭುತದೂತಂ-ಮಹಾಕಾವ್ಯ, ಪ್ರಸನ್ನಕಾಶ್ಯಪಂ, ಮಣಿಹರಣಂ, ಅದ್ಭುತಾಂಶುಕಂ ಪ್ರತಿಜ್ಞಾ ಕೌಟಿಲ್ಯಂ, ಮಂಜುಳ ಮಂಜೀರಂ ಮುಂತಾದವು ಅವರ ನಾಟಕಗಳು, ಜಯಂತಿಕಾ-ಬಾಣನ ಕಾದಂಬರಿಯಂತಿರುವ ಗದ್ಯಕಾವ್ಯ, ಯದುವಂಶ ಚರಿತವು ಹರ್ಷಚರಿತವನ್ನು ಅನುಕರಿಸಿ ಬರೆದಿರುವ ಮೈಸೂರೊಡೆಯರ ಚರಿತ್ರೆ. ಕವಿಯ ಶೈಲಿಯು ಸರಳವಾಗಿದೆ ವರ್ಣನೆಗಳು ಹಿತಮಿತವಾಗಿವೆ.

**ಪೂರ್ವಕಥೆ**

ಯದುವಂಶದ ಯದುರಾಯ ಕೃಷ್ಣರಾಯರೆಂಬ ಸೋದರರು ಕಾರಣಾಂತರದಿಂದ ಮಹೀಶೂರ ದೇಶವನ್ನು ಪ್ರವೇಶಿಸಿದ್ದಾರೆ. ತೀರ್ಥಯಾತ್ರಾ ಪ್ರಸಂಗದಿಂದ ಯದುಗಿರಿ (ಮೇಲುಕೋಟೆ) ಯನ್ನು ಪ್ರವೇಶಿಸಿದ್ದಾರೆ. ಅಲ್ಲಿಂದ ಗರಳಪುರಿ (ನಂಜನಗೂಡು) ಕ್ಷೇತ್ರ ದರ್ಶನಮಾಡಿ ಮಲಗಿರುವಾಗ ಸ್ವಪ್ನವೊಂದು ಬೀಳುತ್ತದೆ. ಅದರಂತೆ ಅವರು ಮಾರನಾಯಕನನ್ನು ಕೊಂದು, ಮೈಸೂರು ರಾಜ್ಯದ ಅರಸರಾದ ಕಥೆ ಇಲ್ಲಿಯ ವಸ್ತು.

---

# यदुवंशराज्यप्राप्तिः

आसाद्य च कल्याणतीर्थोदककृतावगाहनः भगवद्रामानुजाचार्यनिर्मिते मन्दिरे विराजमानं शङ्खचक्रगदादि-दिव्यायुधपरिमण्डितचतुर्भुजं क्षीरोदधिफेनपिण्डपाण्डव-कौशेयकल्पितकमनीयकच्छम्, आपादलम्बमानतुलसीमालामनोहरं भवभयहरं भगवन्तं श्रीनारायणं प्रणम्य प्रमोदामृतह्रदमग्न इव सबाष्पगद्गदं सभक्त्युन्मेषं स्तुत्वा, श्री-भूनीलाकटाक्षशारं सम्पत्कुमारं च प्रणिपत्य, यदुगिरिमन्दिरामिन्दिरां च भक्त्या प्रणम्य, यदुगिरिशिखरगुहोदरविहारं भक्ताग्रेसरप्रह्लादप्रतिष्ठितं समग्रजनानुग्रहव्यग्रं योगासनासीनं नरकेसरिणं प्रणिपातपुरस्सरं स्तुत्वा च, निर्गत्य च तस्मात् शिलादिवर परम्परास्खलनजनितकलकलरवतरङ्गमनोहरलहरीं कावेरीमतीत्य, महाबलपर्वत-मुपेत्य, तत्र विराजमानां जगज्जननीमादिशक्तिं भक्त्या चामुण्डेश्वरीं सम्पूज्य, ततः प्रस्थितश्च दक्षिणतो योजनदूरवर्तिन्यां गरलपुर्यां निवसन्तं श्रीकण्ठेश्वरमभिवन-द्य

नन्दितहृदयः भगवति विवस्वति चरमगिरिशिखरमधिगतवतिनिर्वर्तितसन्ध्यादिविधिः कञ्चित्कालं सहोदरेण सल्लपन्निद्रासुखमनुबभूव ।

तदनु जगच्चक्षुषीव समुन्मिषत्यस्यापि चक्षुषि, यदुरायस्समुत्थाप्य निजानुजायाभिधाय 'वत्स ! रमणीरूपिण्या चामुण्डाम्बिकया श्वः प्रभात एव महाबलस्याग्नेयदिशि निषूदितरक्तबीजासुरां जलजिह्वां नाम देवीं सम्पूज्य महिशूरनगरस्य पूर्वदिग्भागे तृणबिन्दुतपोधनाराधितप्रमथाधिपधिष्ण्यपृष्ठवर्ति नि तटाकभैरवमन्दिरे तिष्ठतु भवान्, तदा समायाति यतिवेषधारि कश्चनलिङ्गी, तदादेशनिवर्तनेन कल्याणभाजनं भविष्यती'ति निगदितं स्वप्नोदन्तं, तदेव भैरवमन्दिरमगच्छत् ।

तत्र च निषण्णे च तस्मिन् स्वप्नोदन्तस्मरणविस्मितमानसे, पिशङ्गजटाजटिलमस्तकः तिर्यक्चर्चितशुभ्रभसितत्रिपुण्ड्रमण्डितललाटः, धवलतन्तुलम्बितान्तनिहितलिङ्गमङ्गलभासुररजतकरण्डकमण्डितविशालवक्षस्थलः आजानुधृतकाषायांशुकपरिधानः करधृतभिक्षाकपालः प्रांशुः कलधौतधौतदेहः कश्चन भिक्षुकस्समाजगाम ।

तं भिक्षुकमभिवीक्ष्य विलक्षो यदुरायः सप्रश्रयं प्रणिपत्य, दिष्ट्योपनतं तत्रभवतां दर्शनं धन्योऽभवमिति समर्प्यचासनं तदनुज्ञया नातिदूरे निषसाद । तदनु सः निजगाद 'वत्स जैत्रातृक ! श्रावयामि ते रहस्यमेकम् । पुरा किलामितपराक्रमो गौतमगोत्रोद्भवः भोजवंश्यः शूरदेवरायोनाम राजा मधुरां विहाय कर्णाटदेशमेनमसाद्य, चामुण्डाम्बिकानुग्रहाधिगतनिधिः राजा बभूव । तस्य वंश्यो महावीरश्चामराजो नाम पुत्रिकारत्नैकापत्यः विजितपरलोकोऽपि विधिवशात् परलोकवशंवदतामगमत् । अराजके च राज्ये वीराग्रणी राज्यलुब्धः मारनायको नाम सेनापतिः समाश्रितराजभावः दुर्भावेन प्रतिदिनमपि परिपीडयति चामराजमहिषीं पतिविरहदुःखितां देवाजाम्बाम् । तदिदानीं नृशंसं परस्वापतेयस्तेयं मारनायकं मारं विरूपाक्ष इव मारयितुं पारयति धाराग्रणीर्भवान्' इत्यभिधायान्तरधात् । यदुराये तु "हन्त किमिदं कथं मारयितव्यः स मारनायकः ? कथं प्रवेष्टव्यं नगरमिदम् ? नगरेऽस्मिन्

को वा जानाति माम् ? को वा साह्यकृत् भविष्यति ? कथं वा प्रासादं प्रवेक्ष्यामि'' इति बहुधा विचिन्तयति, अन्यः सन्निहितः लिङ्गी, "तात ! अलं चिन्तया, कारयाम्यहमेव सर्वमपि, प्रागागतस्य लिङ्गिवेषधारिणः कपर्दिनोऽहमाज्ञाधारी. मद्वचनमनुसरतस्ते भविष्यति कल्याणपरम्परा'' इति निजगाद ।

तदैव देवाजाम्बापक्ष्यौ साचिव्यनिपुणातौ तिम्मरस-नारायणनामानौ अक्षरचणौ सरभसमासाद्य तस्मै लिङ्गिने सप्रश्रयं प्रणम्य, "भगवन् भवदनुज्ञया देवाजाम्बया सर्वं सज्जीकृतम् ; मारनायकारातयः मल्लाः वेषान्तरनिगूढस्वरूपाः सौधद्वारि स्थापिताः । उपप्रासादाभ्यन्तरेऽपि कोणेषु वीरपुरुषास्तदरयो वर्तन्ते निगूढशरीरास्सायुधाः । तदधुना राजधानीप्रवेशमर्हतः सुकुमारौ राजकुमारावेतौ'' इति सविनयं व्यजिज्ञपताम् ।

तदनु प्रमोदहृदयस्स लिङ्गी यदुरायमाज्ञाप्य मारनायकमारणाय ताभ्यां सममक्षरचणाभ्यामनुगम्यमानः नगराभिमुखः प्रतस्थे । यदुरायस्तु गच्छन्ननुजेन सह गोपुर एव मारनायकपक्ष्यैः वीरपुरुषैर्निरुद्धः क्रुद्धः नियुध्य तानखिलानपि प्राहिणोत् दण्डधरनगरगोपुरं प्रति । अथ तत्पराक्रमाक्रान्तविस्मयविस्मारितमानसैः तत्रत्यैः स्तूयमान मत्तगजगमनः व्रजन्नुपप्रासादं प्राविशत् ।

मारनायकस्तु विदितवृत्तान्तः कृपाणपाणिः सरभसं निस्सृतः प्रासादात् प्रविश्योपप्रासादं भद्रासनोपविष्टं, नयनसरोरुहप्रकटितगाम्भीर्यं आजानुलम्बमानभुजदण्डविडम्बितगजशुण्डाडम्बरं तं यदुरायमाराद्ददर्श ।

दृष्ट्वा च तत्तेजः क्षणं निश्चेष्टः क्रोधकम्पितगात्रः मारनायको यदुरायमब्रवीत् । 'अङ्ग, कस्त्वम् ? कथमायातो नगराभ्यन्तरम् ? कथमासीत्प्रासादप्रवेशः ? कस्व साह्यमवलम्बनं ते ? किमु जानीषे मारनायकं वीरनायकम् ? न किमु ते श्रुतिपथमारूढो जगदधिरूढस्तस्य पराक्रमः ? यदि जीवितापेक्षा शरणागतो भव ! न यदि तथा रणागतो भवे'ति ।

यदुरायस्तु 'किं मुधा बहुधा विकत्थनेन, भवानेव खलु मारनायकः! वचः-परिपाट्येव ते प्रकटयति मारनायकत्वम्, न पुनर्वीरनायकत्वम्। पश्यामस्तावत् रणशिरसि कस्य शरणं मरणं वे' त्यकथयत्। तदवकर्ण्य मारनायकः कोशात्-करवालमाकृष्य सरभसमुज्जगाम। तदनु प्रवृत्ते चानिरुद्धे युद्धे साम्परायिकनिपुणो यदुरायो मारयामास मारनायकम्। अथ विदितवृत्तान्ता देवाजाम्बा प्रमोदभर-निर्गलद्बाष्पपूरपरिप्लावितविततनयना दिष्ट्या समुपलब्धश्शूरश्शौरिरिव रूपसम्पदा जामातेति चिन्तयन्ती निजसम्पदभिभूतसुरनगरीं नगरीं प्रावेशयद्यदुरायं ससहोदरं वारणाधिरूढम्।

प्रवेशितश्च स यदुरायः वादित्ररसितमुखरितं सहकारकिसलयतोरणरम्भास्तम्भ-परिष्कृतसितवितानकेतुततिततविततकायमानकमनीयपुरोभागं प्रविवेश प्रासादम्। प्रविश्य चावरोधं प्रणम्य चामराजमहिष्यै स्थितः। तदनु सा 'दत्तमिदं प्राज्यं राज्यं भवते, जयलक्ष्मीमिव लक्ष्मीरूपां देवराजाम्बां नाम मद्दुहितरं पाणिग्रहेणानुगृह्याभि-षिक्तो निष्कण्टकं परिपालयतु महीशूरदेशं राजाधिराजो भवान्, इतःपरं भवन्तु यदुवंश्या एव राजानः' इत्यकथयत्। अथ शुभंयुमुहूर्ते मणिदीपगणजनितनक्षत्रसन्दोह-सन्देहे विवाहमण्डपे विधिवत्परिगृहीतदेवराजाम्बापाणिपल्लवः कमलया कमलनाभ इव रराज तया यदुरायः।

तदनु श्रोत्रियैः समाहृतेषु पुण्यतीर्थोदकेषु सिंहासनाधिरूढे च यदुराये साङ्गाम्नायपारदृश्वानः ज्ञानेन वयसा च वृद्धाः द्विजोत्तमाः पुण्यतीर्थोदकभरितैः आवर्जितैः कनककलशैः वसव इव वासवमभ्यषिञ्चन्यदुरायम्।

ಕಠಿನ ಶಬ್ದಗಳ ಅರ್ಥ :

अवगाहनः = ಸ್ನಾನಮಾಡಿದವನು, ಮುಳುಗಿದವನು ; कौशेय = ರೇಶ್ಮೆಯ ವಸ್ತ್ರ ; कच्छं = ಕಚ್ಚೆ (ಕಾಸೆ) ; ह्रदः = ಮಡು ; शार = ರಂಜಿತ (ರಂಗಾಗಿರುವ) ; महाबलपर्वतः = ಚಾಮುಂಡಾದ್ರಿ ; गरलपुरी = ನಂಜನಗೂಡು ; जगच्चक्षुषीव-चक्षुषि = ಸೂರ್ಯ ಉದಯಿಸಿದಂತೆ ಈತನ ಕಣ್ಣು ತೆರೆಯಲು ; तृणबिन्दु = ಒಬ್ಬ ಋಷಿ ; धिष्ण्यं = ಮಂದಿರ, ನಿಲಯ ;

पिशंग = ಕೆಂಚ (ನಸ್ಯ ಬಣ್ಣದ) ; प्रांशुः = ಎತ್ತರವಾದ ; जवातृक = ದೀರ್ಘಾಯುಷ್ಮಾನ್ ; वशंवदता = ಅಧೀನತೆ ; कपर्दी = ಜಟಾಧರ (ಶಿವ) ; अक्षरचणः = ಕರಣಿಕ ; नियुघ्य = ಕಾದಿ, ಸೆಣಸಿ ; गोपुर = ಬಹಿದ್ವಾರ (ಗೋಪುರ) ; दण्डधर = ಯಮರಾಜ ; आरात् = ದೂರದಿಂದ (आरात् दूरसमीपयोः = ಅಮರ) ; मुधा = ವ್ಯರ್ಥವಾಗಿ ; विकत्थनं = ಜಂಭ ಕೊಚ್ಚುವುದು ; परिपाटी = ಧಾಟಿ ; साम्परायिक =ಯುದ್ಧಕಲೆ ; रम्भास्तम्भ =ಬಾಳೆಯ ಕಂಬ ; कायमान = ಶರೀರದ ಅಳತೆ (ಇಲ್ಲಿ—ಪ್ರಾಸಾದ ಶರೀರ–ದ ಅಳತೆ) ; अवरोधः = ಅಂತಃಪುರ ; शुभंयु = ಶುಭಕರ ; संदोह = ರಾಶಿ, ಮಣಿದೀಪಗಣವು ನಕ್ಷತ್ರ ಗಣವೇ ಎಂಬ ಸಂದೇಹವನ್ನುಂಟುಮಾಡುತ್ತಿತ್ತು.) ; आम्नायः = ವೇದರಾಶಿ ; पारदृश्वानः = ಪಾರಂಗತ ರಾದವರು.

### ಮಾದರಿ ಪ್ರಶ್ನೆಗಳು

ಅಭ್ಯಾಸ :

1. ಯದುರಾಯನಿಗೆ ಆದ ಕನಸಿನ ವೃತ್ತಾಂತವನ್ನು ಬರೆಯಿರಿ.
2. ಭೈರವ ಮಂದಿರದಲ್ಲಿ ಕುಳಿತಿದ್ದ ಯದುರಾಯ ಕೃಷ್ಣರಾಯರಲ್ಲಿಗೆ ಬಂದ ತಪಸ್ವಿ ಯಾರು ? ಅವನು ಇವರಿಗೆ ಹೇಳಿದ್ದೇನು ?
3. ಯದುರಾಯನಿಗೆ ಒದಗಿದ ದೈವಸಹಾಯವನ್ನು ವರ್ಣಿಸಿ.
4. ಮಾರನಾಯಕನು ಯಾರು ? ಅವನಿಗೂ ಯದುರಾಯನಿಗೂ ಆದ ವೀರ ಸಂಭಾಷಣೆ ವನ್ನು ಚಿತ್ರಿಸಿ.
5. ದೇವಾಜಾಂಬೆಗೆ ಒದಗಿದ ಕಷ್ಟವೇನು ? ಆ ಕಷ್ಟಪರಿಹಾರವು ಯಾರಿಂದ ಹೇಗೆ ಆಯಿತೆಂಬುದನ್ನು ವಿವರಿಸಿ.

## (ಈ) ಕಾವ್ಯಮೀಮಾಂಸಾ

ಇದರ ಕರ್ತೃ ರಾಜಶೇಖರ

ಇವನು ಯಾಯಾವರ ಕುಲದಲ್ಲಿ ಜನಿಸಿದವನು. ಕವಿಗೆ ತನ್ನ ಪೂರ್ವಜರಲ್ಲೂ ತನ್ನಲ್ಲೂ ಬಹಳ ಅಭಿಮಾನವುಂಟು. ದುರ್ದುಕ ಅಥವಾ ದುಹಿಕ ಅವನ ತಂದೆ ; ಕವಿ ಯುಜುರ್ವೇದಿ. ಮಹೇಂದ್ರಪಾಲನು ಇವನ ಶಿಷ್ಯ. ಕವಿಯ ಮಡದಿ ಅವಂತಿಸುಂದರೀ ; ಬಹು ಮುಖ ಪ್ರತಿಭೆಯುಳ್ಳವಳು. ಕನೂಜಿನ ಅರಸ ಮಹೇಂದ್ರಪಾಲನ ಆಸ್ಥಾನಕವಿತ್ವ ಅವನ ಅಗ್ಗಳಿಕೆಯಾಗಿತ್ತು. ಮಹೇಂದ್ರಪಾಲನು ಕಿ. ಶ. 903 ರಿಂದ 907ರ ವರೆಗೆ ರಾಜನಾಗಿ ದ್ದನು. ರಾಜಶೇಖರನು ತನ್ನ ಕಾವ್ಯ ಮೀಮಾಂಸೆಯಲ್ಲಿ ವಾಕ್ಪತಿರಾಜ, ಉದ್ಭಟ ಮುಂತಾ ದವರನ್ನು ಸ್ಮರಿಸಿದ್ದಾನೆ. ಆ ಕಾರಣ ಕವಿಯು ಕಿ. ಶ. 880–920ರ ಮಧ್ಯೆ ಬದುಕಿದ್ದ

ನೆಂದು ನಿರ್ಧರಿಸಬಹುದು. ಕವಿಯು ತನ್ನನ್ನು ಕವಿರಾಜನೆಂದು ನುಡಿದುಕೊಳ್ಳುತ್ತಾನೆ. ಬಹು ಭಾಷಾವಿದನಾಗಿ ಬಹುಮುಖವಾದ ಕವಿತ್ವ ರಚನಾ ಸಾಮರ್ಥ್ಯವುಳ್ಳವನನ್ನು ಸಾಹಿತ್ಯ ಮರ್ಮಜ್ಞರು ಕವಿರಾಜನೆನ್ನುತ್ತಾರೆ. ಬಾಲರಾಮಾಯಣ, ಬಾಲ ಭಾರತ, ಕರ್ಪೂರ ಮಂಜರೀ, ಕಾವ್ಯ ಮೀಮಾಂಸೆಗಳು ಅವನ ಕೃತಿಗಳು.

ಕಾವ್ಯ ಮೀಮಾಂಸೆಯು 18 ಅಧಿಕರಣಗಳಿಂದ ಕೂಡಿದ ಮೇರುಕೃತಿ. ಒಂದೊಂದು ಅಧಿಕರಣದಲ್ಲೂ ಅನೇಕ ವಿಭಾಗಗಳುಂಟು. ಪ್ರಕೃತ ದೊರೆತಿರುವುದು ಕವಿರಹಸ್ಯವೆಂಬ ಪ್ರಥಮಾಧಿಕರಣ ಮಾತ್ರ. ಅದರ 3ನೆಯ ಅಧ್ಯಾಯದಿಂದ ಆರಿಸಿದ ಭಾಗವೇ "ಕಾವ್ಯ ಪುರುಷೋತ್ಪತ್ತಿಃ"

---

# राजशेखरकृता काव्यमीमांसा

## काव्यपुरुषोत्पत्तिः

एवं गुरुभ्यो गिरः पुण्याः पुराणीः शृणुमः स्म यत् किल धिषणं शिष्याः कथाप्रसङ्गे पप्रच्छुः "कीदृशः पुनरसौ सारस्वतेयः काव्यपुरुषो वो गुरुः!" इति। स तान् बृहताम्पतिरूचे ।

पुरा पुत्रीयन्ती सरस्वती तुषारगिरौ तपस्यामास । प्रीतेन मनसा तां विरिञ्चः प्रोवाच 'पुत्रं ते सृजामि' इति । अथैषा काव्यपुरुषं सुषुवे । सोऽभ्युत्थाय सपदोपग्रहं छन्दस्वतीं वाचमुदचीचरत् ।

यदेतद्वाङ्मयं विश्व
मर्थमूर्त्या विवर्तते ।
सोऽस्मि काव्यपुमानम्ब
पादौ वन्देय तावकौ ॥ इति ।

तामाम्नायदृष्टचरीमुपलभ्य भाषाविषये छन्दोमुद्रां देवी ससम्भ्रममङ्कपर्यङ्केना दाय तमुदलापयत् । 'वत्स स्वच्छन्दस्काया गिरः प्रणेतर्वाङ्मयमातरमपि मातरं मां विजयसे । प्रशस्यतरं चेममुदाहरन्ति यदुत' 'पुत्रात्पराजयो द्वितीयं पुत्रजन्म' इति । त्वत्तः पूर्वे हि विद्वांसो गद्यं ददृशुर्न पद्यम् । त्वदुपज्ञमथातः छन्दस्वचः प्रवर्त्स्यति । अहो श्लाघनीयोऽसि । शब्दार्थौ ते शरीरं, संस्कृतं मुखं, प्राकृतं बाहुः, जघनमपभ्रंशः, पैशाचं पादौ, उरो मिश्रम् । समः प्रसन्नो मधुर उदार ओजस्वी चासि । उक्तिचणं च ते वचः, रस आत्मा, रोमाणि छन्दांसि, प्रश्नोत्तरप्रवह्लिकादिकं च वाक्केलिः, अनुप्रासोपमादयश्च त्वामलङ्कुर्वन्ति । भविष्यतोऽर्थस्याभिधात्री श्रुतिरपि भवन्तमभिष्टौति ।

चत्वारि शृङ्गास्त्रयोऽस्य पादा
द्वे शीर्षे सप्तहस्तासोऽस्य ।
त्रिधा बद्धो वृषभो रोरवीति
महो देवो मर्त्यमाविवेश ॥

तथापि संवृणु प्रगल्भस्य पुंसः कर्म । कालोचितं चेष्टस्व' इति निगद्य निवेश्य चैनमनोकहाश्रयिणि गण्डशैलतलतल्पे स्नातुमभ्रगङ्गां जगाम । तावच्च कुशान् समिधश्च समाहर्तुं निस्सृतो महामुनिरुशना परिवृते पूष्ण्यूष्मोपप्लुतं तमद्राक्षीत् । कस्यायमनाथो बाल इति चिन्तयन् स्वमाश्रमपदमनैषीत् । क्षणादाश्वस्तश्च स सारस्वतेयस्तस्मै छन्दस्वतीं वाचं समचारयत् । अकस्माद्विस्मापयन् स चाभ्युवाच ।

या दुग्धापि न दुग्धेव कविदोग्धृभिरन्वहम् ।
हृदि नः सन्निधत्तां सा सूक्तिधेनुः सरस्वती ॥ इति ।

तत्पूर्वं क्रमव्येतॄणां च सुमेधस्त्वमादिदेश । ततः प्रभृति तमुशनसं सन्तः कविरित्याचक्षते । तदुपचारगच्च कवयः कवयः इति लोकयात्रा । कविशब्दश्च

कवृ-वर्ण इत्यस्य धातोः काव्यकर्मणो रूपम्। काव्यैकरूपत्वाच्च सारस्वतेयोऽपि काव्यपुरुष इति भक्त्या प्रयुञ्जते। ततश्च विनिवृत्ता वाग्देवी तत्र पुत्रमपश्यन्ती मध्येहृदयं चक्रन्द। प्रसङ्गागतश्च वाल्मीकिर्मुनिवृषा सप्रश्रयं तमुदन्तमुदाहृत्य भगवत्यै भृगुसूतेराश्रमपदमदर्शयत्। सापि प्रस्नुतपयोधरा पुत्रायाङ्कपालीं ददाना शिरसि च चुम्बन्ती स्वस्तिमता चेतसा प्राचेतसायापि महर्षये निभृतं स्वच्छन्दांसि वचांसि प्रायच्छत्। अनुप्रेक्षितश्च तया स निषादनिहतसहचरीकं क्रौञ्चयुवानं करुणक्रेङ्कारया गिरा क्रन्दन्तमुदीक्ष्य शोकवान् श्लोकमुज्जगाद।

'मा निषाद प्रतिष्ठां त्व-
मगमः शाश्वतीः समाः।
यत्क्रौञ्चमिथुनादेक-
मवधीः काममोहितम्॥ इति।

ततो दिव्यदृष्टिर्देवी तस्मा अपि श्लोकाय वरमदात्; यदुतान्यदनधीयानः प्रथममेनमध्येष्यते स सारस्वतः कविः सम्पत्स्यत इति। स तु महामुनिः प्रवृत्तवचनो रामायणमितिहासं समदृभत्। द्वैपायनस्तु श्लोकप्रथमाध्यायी तत्प्रभावेन शतसाहस्रीं संहितां भारतम्।

ಟಿಪ್ಪಣಿ ಇತ್ಯಾದಿ:

काव्यपुरुषोत्पत्तिः—

ಈ ಅಧ್ಯಾಯದಲ್ಲಿ ರಾಜಶೇಖರನು ಕಾವ್ಯಪುರುಷನ ಉತ್ಪತ್ತಿಯನ್ನು ಕುರಿತು ವಿವರಿಸುತ್ತಿದ್ದಾನೆ. ಕಾವ್ಯಪುರುಷನು ಸರಸ್ವತಿಯ ಪುತ್ರ.

गुरुः—ಉಪಾಧ್ಯಾಯ. ಕಾವ್ಯಪುರುಷನು ಬೃಹಸ್ಪತಿಯ ಗುರು. ಬೃಹಸ್ಪತಿಯು ಕಾವ್ಯಪುರುಷನಿಂದ ಕಾವ್ಯಲಕ್ಷಣವನ್ನು ಕಲಿತು ದೋಷಾधिकरण ವನ್ನು ಬರೆದನೆಂಬುದು ರಾಜಶೇಖರನ ಅಭಿಪ್ರಾಯ.

पुत्रं + (आत्मार्थे) इच्छन्ती = पुत्रीयन्ती

तुषारगिरौ = ಹಿಮಾದ್ರಿಯಲ್ಲಿ

छन्दस्वतीं वाचम्— ಛಂದಃಪೂರ್ಣವಾದ ಮಾತನ್ನು

ಈ ಪ್ರಕರಣದಲ್ಲಿ ರಾಜಶೇಖರನು ಕಾವ್ಯಪುರುಷನನ್ನು ಸರಸ್ವತಿಯ ಕುಮಾರನೆಂದು ವರ್ಣಿಸಿದ್ದಾನೆ. ಕವಿಯ ಅಭಿಪ್ರಾಯದಂತೆ ಬ್ರಹ್ಮನು ಅವನ ತಂದೆ. ಆದರೆ ವಾಯುಃ ಪುರಾಣದಲ್ಲಿ ಅಭಿಪ್ರಾಯಭೇದವುಂಟು. ಬಾಣನ ಹರ್ಷಚರಿತದಲ್ಲೂ ಈ ಬಗ್ಗೆ ಉಲ್ಲೇಖವುಂಟು. ಅವನ ಅಭಿಪ್ರಾಯದಲ್ಲಿ ಸಾರಸ್ವತೇಯನು ಚ್ಯವನಪುತ್ರ ದಧೀಚನ ಮಗ.

ಮಹಾಭಾರತದ ಶಾಂತಿಪರ್ವದಲ್ಲಿ ಮತ್ತೊಂದು ವಿಧವಾದ ವಿವರಣೆಯುಂಟು. ಕಾವ್ಯ ಪುರುಷನು ಸಕಲಶಾಸ್ತ್ರ ವಿಶಾರದನೆಂಬುದರಲ್ಲಿ ಎಲ್ಲ ಕತೆಗಳೂ ಒಪ್ಪುತವಾಗಿವೆ. ಮಹಾಭಾರತ ದಂತೆ ಪರಮಾತ್ಮನು ಸರಸ್ವತಿಗೆ ವರಪುತ್ರನನ್ನು ಕರುಣಿಸಿದನು. ಆತನೇ ಸಾರಸ್ವತೇಯ—ಕಾವ್ಯ ಪುರುಷ. ಪರಮಾತ್ಮನ ಆದೇಶದಂತೆ ಅವನು ಸ್ವತಃ ವೇದವನ್ನು ಅಧಿಕರಿಸಿ ಪ್ರಚುರಪಡಿಸಿದ. ಅವನಿಗೆ ಮುಂದೆ ವ್ಯಾಸನೆಂದು ಹೆಸರಾಯಿತು. ಅವಾಂತರ ತಮಸ್ ಎಂಬುದು ಅವನಿಗೆ ಮತ್ತೊಂದು ಹೆಸರು. ಶಲ್ಯ ಪರ್ವದಲ್ಲೂ ಇಂತಹುದೇ ಹೇಳಿಕೆಯುಂಟು. ಆದರಂತೆ ದಧೀಚಿ ಅಲಂಬುಸೆಯೆಂಬ ಅಪ್ಸರೆಯಲ್ಲಿ ಅನುರಕ್ತನಾದ. ಆತ ತನ್ನ ತೇಜಸ್ಸನ್ನು ಸರಸ್ವತೀ ನದಿಯಲ್ಲಿ ವಿಸರ್ಜಿಸಿದ. ಅದರ ಫಲವಾಗಿ ಸರಸ್ವತೀ ತರಂಗಿಣಿ ಒಬ್ಬ ಕುಮಾರನಿಗೆ ಜನನವಿತ್ತಳು. ಅಶ್ವಘೋಷನ ಬುದ್ಧಚರಿತದಲ್ಲೂ ಈ ಹೇಳಿಕೆಗೆ ಪ್ರಮಾಣವುಂಟು.

यदेतत वाङ्मयम्—

ಈ ಪದ್ಯದ ಪೂರ್ವಾರ್ಧದಲ್ಲಿ ವಾಕ್ಯಪದೀಯದಲ್ಲಿ ವಿವರಿಸಿರುವಂತೆ ಶಬ್ದಬ್ರಹ್ಮವಾದವಿದೆ. ಅದರಂತೆ ಶಬ್ದಬ್ರಹ್ಮ ಅಥವಾ ನಾದವು ಪರಬ್ರಹ್ಮನಿಂದ ಉದಯಿಸಿತು. ಅದು ವಿವರ್ತವಾಗಿ ಜಗತ್ಕಾರಣವಾಯಿತು. ಈ ನಾದವನ್ನೇ ಶಾಸ್ತ್ರಜ್ಞರು परावाक् ಎನ್ನುತ್ತಾರೆ. ಇದರಿಂದಲೇ पश्यन्ती, मध्यमा, वैखरी ಎಂಬ ಮೂರು ಬಗೆಯ ಮಾತುಗಳು ಜನಿಸಿದವು ಅರ್ಥಸ್ಫೂರ್ತಿಗೆ ಇವೇ ಕಾರಣಗಳು. ವಾಕ್ಯಪದೀಯದ ಈ ಮಾತುಗಳನ್ನು ಗಮನಿಸಿ—

अनादिनिधनं ब्रह्म शब्दतत्वं यदक्षरम् ।
विवर्ततेऽर्थभावेन प्रक्रिया जगतो यतः ॥

यो वार्थो बुद्धिविषयो ऽबाह्यवस्तुनिबन्धनः ।
स बाह्यं वस्त्विवति ज्ञातः शब्दार्थः सम्यगिष्यते ॥

शब्दोपहितरूपांश्च बुद्धेर्विषयतां गतान् ।
प्रत्यक्षमिव कंसादीन् साधनत्वेन मन्यते ॥

न सोऽस्ति प्रत्ययो लोके यः शब्दानुगमादृते ।
अनुविद्धमिव ज्ञानं सर्वं शब्देन भासते ॥
अत्यन्तासत्यपि ह्यर्थे ज्ञानं शब्दः करोति हि ॥

विवर्ते—ವಿವರ್ತವೆಂಬುದು ಭ್ರಾಂತಿಮೂಲ ಜ್ಞಾನ.

ಉದಾ—ರಜ್ಜುವಿನಲ್ಲಿ ಸರ್ಪಭ್ರಾಂತಿ, ರಜ್ಜುವಿನಲ್ಲಿಲ್ಲದ ಸರ್ಪತ್ವವು ಭ್ರಾಂತಿ ಮೂಲ ವಾದುದು.

स्वर्गाढ्यम्—ಆದಿಕವಿಯು ವಾಲ್ಮೀಕಿಯೆಂಬುದು ಲೋಕಪ್ರಸಿದ್ಧ. ಪ್ರಥಮತಃ ಛಂದೋ ಮಯವಾದ ವಾಣಿ ಅವನ ಬಾಯಿಂದ ಹೊರಟಿತು. ಅದೇ मानिषाद ಎಂಬ ಲೋಕಪ್ರಸಿದ್ಧವಾದ ಪದ್ಯ. ಆದರೆ ರಾಜಶೇಖರನ ಮತದಂತೆ ಶುಕ್ರಾಚಾರ್ಯರು ಆದಿಕವಿ. ಅವನಿಂದಲೇ ಮೊದಲ ಶ್ಲೋಕವು ರಚಿತವಾಯಿತು. ಶುಕ್ರಾಚಾರ್ಯರಿಗೆ कवि ಎಂದೇ ಪರ್ಯಾಯನಾಮವುಂಟು. उशना भार्गवः कविः ಎಂಬ ಅಮರ ಕೋಶವನ್ನು ಇಲ್ಲಿ ಸ್ಮರಿಸಬಹುದು.

रस आत्मा—ರಸವು ಕಾವ್ಯದ ಜೀವಜೀವಾಳ. ಕಾವ್ಯದ ವಿಮರ್ಶೆಯಲ್ಲಿ ಅನೇಕ ವಾದ ಗಳುಂಟು. ಅದರಲ್ಲಿ ರಸಾತ್ಮವಾದವು ಬಲು ಮುಖ್ಯವಾದುದು. ಈ ವಾದವನ್ನು ಪ್ರಥಮತಃ ಮುಂದಿಟ್ಟವನು ಭರತಮುನಿ. ಅವನು ಈ ವಾದವನ್ನು ನಾಟಕಗಳಿಗೆ ಮಾತ್ರ ಅನ್ವಯಿಸಿದನು. ಮುಂದಿನ ಶಾಸ್ತ್ರಜ್ಞರು ಇದನ್ನು ಕಾವ್ಯಗಳಿಗೂ ಅನ್ವಯಿಸಿದರು. ಮುಂದೆ ಅಲಂಕಾರ, ಗುಣ, ರೀತಿ, ಧ್ವನಿ, ವಕ್ರೋಕ್ತಿ, ಅನುಮಿತಿ, ಔಚಿತ್ಯ ಮುಂತಾದ ವಾದಗಳು ಜನಿಸಿದರೂ ಯಾರೂ ರಸವನ್ನು ಅಲ್ಲಗಳೆದಿಲ್ಲ. ಕ್ರಿ ಶ. 9ನೆಯ ಶತಮಾನದ ಮಧ್ಯಭಾಗದಲ್ಲಿ ಆಚಾರ್ಯ ಆನಂದ ವರ್ಧನನು ರಸಾತ್ಮವಾದವನ್ನು ತನ್ನ ಧ್ವನ್ಯಾಲೋಕದಲ್ಲಿ ಪುಷ್ಟೀಕರಿಸಿದನು. ರಾಜಶೇಖರನು ಈ ವಾದವನ್ನೇ ಇಲ್ಲಿ ಅಂಗೀಕರಿಸಿದ್ದಾನೆ,

चत्वारिंशच्च:—ಸಾಹಿತ್ಯಕ್ಕೆ ಇದನ್ನು ಅನ್ವಯಿಸುವಾಗ ಸಪ್ತಸ್ವರಗಳು, ಮೂರು ಸ್ಥಾನಗಳು, ನಾಲ್ಕು ವರ್ಣಗಳು, ದ್ವಿವಿಧವಾದ ಕಾಕು, ಷಡಲಂಕಾರಗಳು, ಷಡಂಗಗಳು ಎಂದು ಅರ್ಥಮಾಡಬೇಕು.

या दृश्यापि—ತ್ರಿವಿಕ್ರಮನ ನಳಚಂಪೂವಿನ ಮಂಗಳ ಪದ್ಯವೆಂಬುದು ಮಾತೃಕೆಗಳಲ್ಲಿ ಕಾಣಬರುತ್ತದೆ.

तदुपचारात्—ಲಕ್ಷಣೆಯಿಂದ

भक्त्या—ಲಕ್ಷಣೆಯಿಂದ

अनुप्रेक्षितः—ಆಶೀರ್ವದಿಸಲ್ಪಟ್ಟವನಾಗಿ

निषादनिहतसहचरीकम्—ಇಲ್ಲಿ ರಾಜಶೇಖರನ ಹೇಳಿಕೆಯಂತೆ ಬೇಡನು ಕೊಂದುದು ಹೆಣ್ಣನ್ನು; ಗಂಡನ್ನಲ್ಲ. ಈ ಹೇಳಿಕೆ ವಾಲ್ಮೀಕಿ ರಾಮಾಯಣಕ್ಕೆ ವಿರುದ್ಧವಾದುದು ರಾಮಾಯಣ ದಲ್ಲಿ ಈ ಪ್ರಸಂಗದ ವರ್ಣನೆ ಹೀಗಿದೆ.

> तस्याभ्याशे तु मिथुनं चरन्तमनपायिनम्
> ददर्श भगवांस्तत्र क्रौञ्चयोः चारुनिस्वनम् ।

तस्मात्तु मिथुनादेकं पुमांसं पापनिश्चयः ।
जघान वैरनिलयो निषादस्तस्य पश्यतः ॥
तं शोणितपरीताङ्गं वेष्टमानं महीतले ।
भार्या तु निहतं दृष्ट्वा रुराव करुणां गिरम् ।

ಧ್ವನ್ಯಾಲೋಕದಲ್ಲೂ ರಾಜಶೇಖರನ ಹೇಳಿಕೆಯಂತೆಯೇ ಉಲ್ಲೇಖವಿದೆ. ಬೇಡನು ಬಾಣ ಹೊಡೆದಾಗ ಗಂಡುಪಕ್ಷಿ ಜೋಡಿ ತಪ್ಪಿ ಕೆಳಬಿದ್ದಿತು; ವಾಲ್ಮೀಕಿ ಅದನ್ನು ಕಂಡರು. ಆ ಸಂಗೆ ಕಾರುಣ್यं ಸಮಪದ್ಯತ ಎಂದು ಯಥಾಸಂಚಿಕೆ ಸಮಾಧಾನ ಹೇಳಬೇಕು.

ಹೀಗಾಗಿ ರಾಜಶೇಖರನ ಅಭಿಮತದಂತೆ ಆದಿಕವಿ ಕಾವ್ಯಪುರುಷ; ಬಳಿಕ ಶುಕ್ರ; ಬಳಿಕ ವಾಲ್ಮೀಕಿ.

### ಅಭ್ಯಾಸಗಳು

1. ಸಾರಸ್ವತೇಯನು ಯಾರು ? ಇದರ ಬಗ್ಗೆ ಇರುವ ವಾದಗಳನ್ನು ಸಂಗ್ರಹಿಸಿ.
2. ಕಾವ್ಯಪುರುಷನು ಶುಕ್ರನ ಬಳಿ ಸೇರಿದುದು ಹೇಗೆ ? ಕಾವ್ಯಪುರುಷನು ಶುಕ್ರನನ್ನು ಹೇಗೆ ಅನುಗ್ರಹಿಸಿದನು ?
3. ವಾಲ್ಮೀಕಿ ಆದಿಕವಿಯಾದುದು ಹೇಗೆ ?
4. ರಸವು ಆತ್ಮಾ ಎಂದು ಹೇಗೆ ಸಮರ್ಥಿಸುವಿರಿ ? ಅದು ಹೇಗೆ ಬೆಳೆದು ಪುಷ್ಟಿ ಪಡೆಯಿತು ?
5. येदतद् वाङ्मयम्—ಪದ್ಯವನ್ನು ವ್ಯಾಖ್ಯಾನ ಮಾಡಿ.
6. मानिषाद—ಪದ್ಯದ ಅವತಾರ ಹೇಗಾಯಿತು ? ಪದ್ಯದ ಅರ್ಥವೇನು ?

---

## ಬಾಣಭಟ್ಟನ ಹರ್ಷಚರಿತೆ

**ಹರ್ಷ ಚರಿತೆಯ ಕರ್ತೃ :**

ಇದರ ಕರ್ತೃ ಬಾಣಭಟ್ಟ. ಈತನ ವಿಚಾರವನ್ನು ಈ ಹಿಂದೆಯೇ ಗದ್ಯಸಾಹಿತ್ಯ ಪರಂಪರೆ ಎಂಬ ಶೀರ್ಷಿಕೆಯಡಿಯಲ್ಲಿ ಸೂಚಿಸಲಾಗಿದೆ. ಭಾರತದ ಸಂಸ್ಕೃತ ಕವಿಗಳ ಮನೋಭೂಮಿಕೆಯಲ್ಲಿ ಬಾಣನ ಮಹೋನ್ನತಿ ಅಜರಾಮರವಾದುದು.

ಹರ್ಷಚರಿತೆಯು ಕ್ರಿ. ಶ. 606 ರಿಂದ 647ರ ವರೆಗೆ ಸ್ಥಾಣೇಶ್ವರ ಅನಂತರ ಕನ್ಯಕುಬ್ಜದಲ್ಲಿ ರಾಜ್ಯವಾಳಿ ಉತ್ತರಾಪಥೇಶ್ವರನೆಂಬ ಪ್ರಶಸ್ತಿಗೆ ನಿಜಕ್ಕೂ ಪಾತ್ರನಾಗಿದ್ದ ಬಹುಮುಖ ಪ್ರತಿಭೆಯ ಶ್ರೀ ಹರ್ಷರಾಜನ ಜೀವನಚರಿತ್ರೆ. ಇದು ಒಂದು ಆಖ್ಯಾಯಿಕೆ. ಸಂಸ್ಕೃತ

ಸಾಹಿತ್ಯದಲ್ಲಿ ಒಬ್ಬ ಐತಿಹಾಸಿಕ ವ್ಯಕ್ತಿಯ ಜೀವನ ಚರಿತ್ರೆಯನ್ನು ನಿರೂಪಿಸಹೊರಟ ಪ್ರಪ್ರಥಮ ಗ್ರಂಥ ಭಾರತೀಯ ಇತಿಹಾಸಕಾರರು ಈ ವಿಚಾರದಲ್ಲಿ ಸಾಹಿತಿಗಳಂತೆ ಬಾಣನಿಗೆ ಚಿರಋಣಿಗಳಾಗಬೇಕು.

ಹರ್ಷಚರಿತೆಯ ಮೊದಲ ಮೂರು ಉಚ್ಛ್ವಾಸಗಳಲ್ಲಿ ಬಾಣನು ತನ್ನ ಚರಿತ್ರೆ, ತನಗೂ ಶ್ರೀ ಹರ್ಷರಾಜನಿಗೂ ಆಗುವ ಭೇಟಿ, ಆತನ ಆಸ್ಥಾನದಲ್ಲಿ ಕವಿಯ ಪ್ರತಿಭಾ ಪ್ರಕರ್ಷದ ಮೆಚ್ಚಿಗೆ, ಅದರಿಂದಾಗಿ ದೊರೆತ ಅಭೂತಪೂರ್ವ ಸನ್ಮಾನ, ರಾಜಾಸ್ಥಾನದಿಂದ ತನ್ನೂರಾದ ಪ್ರೀತಿಕೂಟವೆಂಬ ಅಗ್ರಹಾರಕ್ಕೆ ಹಿಂತಿರುಗಿ ಬಂದು ನಡೆದ ವೃತ್ತಾಂತ, ಹಾಗೂ ಆ ನೆವದಲ್ಲಿ ಹರ್ಷಚರಿತೆಯ ಪ್ರಾರಂಭ ಇತ್ಯಾದಿಗಳು ವಿವರಿಸಲ್ಪಟ್ಟವೆ.

ಬಾಣನು ವಾತ್ಸ್ಯಾಯನ ವಂಶದವನು ತನ್ನ ವಂಶದ ಆದಿಯನ್ನು ರಮಣೀಯವಾಗಿ ಕವಿಯು ನಿರ್ಮಿಸಿರುವ ಭಾಗದಲ್ಲಿ ಚಿತ್ರಿಸಹೊರಟಿದ್ದಾನೆ. ಬ್ರಹ್ಮನ ಸಭೆಯಲ್ಲಿ ಸರಸ್ವತಿಯು ದುರ್ವಾಸನಿಂದ ಶಾಪಗ್ರಸ್ತಳಾಗಿ ಭೂಲೋಕಕ್ಕೆ ಬರುತ್ತಾಳೆ. ಅಲ್ಲಿ ಚ್ಯವನ ಪುತ್ರ ದಧೀಚನಲ್ಲಿ ಅನುರಕ್ತಳಾಗಿ "ಸಾರಸ್ವತ"ನೆಂಬ ಪುತ್ರನನ್ನು ಪಡೆಯುತ್ತಾಳೆ. ಈ ಸಾರಸ್ವತನ ದಾಯಾದಿ-ಸಹೋದರ-ವತ್ಸ—ಇವನ ವಂಶದಲ್ಲಿ ಮುಂದೆ ಕುಬೇರನೆಂಬುವನು ಹುಟ್ಟುತ್ತಾನೆ. ಅವನ ನಾಲ್ಕನೆಯ ಪುತ್ರ ಪಶುಪತಿ. ಅವನ ಮಗ ಅರ್ಥಪತಿ, ಇವನೇ ಬಾಣನ ತಂದೆ. ಬಾಣನು ಹುಟ್ಟುವಾಗಲೇ ತಾಯಿಯನ್ನೂ ಹದಿನಾಲ್ಕನೆಯ ವರ್ಷದಲ್ಲಿ ತಂದೆಯನ್ನೂ ಕಳೆದುಕೊಳ್ಳುತ್ತಾನೆ. (ಬಾಣನ ವಿವರವಾದ ಅಧ್ಯಯನಕ್ಕೆ ಸಂಸ್ಕೃತ ಕಾವ್ಯ—ಡಾ. ಕೆ. ಕೃಷ್ಣಮೂರ್ತಿ ಗ್ರಂಥವನ್ನು ನೋಡಿ.)

# बाणभट्टकृतम् हर्षचरितम्

## भुवमवतीर्णा भारती

नमस्तुङ्गशिरश्चुम्बि-
चन्द्रचामरचारवे ।
त्रैलोक्यनगरारम्भ-
मूलस्तम्भाय शम्भवे ॥

एवमनुश्रूयते —

पुरा किल स्वं लोकमधितिष्ठन् परमेष्ठी विकासिनि पद्मविष्टरे समुपविष्टः सुनासीरप्रमुखैर्गीर्वाणैः परिवृतो ब्रह्मोद्याः कथाः कुर्वन्नन्याश्च निरवद्या वि[illegible]गोष्ठी

र्विभावयन् कदाचिदासाञ्चक्रे। तथासीनं च तं त्रिभुवनप्रतीक्ष्यं सर्वे मनुदक्षचाक्षुषप्रभृतयः सिषेविरे। केचिदृचः स्तुतिचतुराः समुदाचरन्। केचिदपचितभाञ्जि यजूंष्यपठन्। केचित् प्रशंसासामानि जगुः। अपरे विवृतक्रतुक्रियातन्त्रान् मन्त्रानाचचक्षिरे। विद्याविसंवादकृताश्च तेषां तत्रान्योन्यस्य विवादाः प्रादुरभवन्। अथातिरोषणः प्रकृत्या महातपा मुनिरत्रेस्तनयस्तारापतेर्भ्राता नाम्ना दुर्वासा द्वितीयेन मन्तुनाम्ना मुनिना सह कलहायमानः साम गायन् क्रोधान्धो विस्वरमकरोत्। सर्वेषु च शापभयात्प्रतिपन्नमौनेषु मुनिषु, अन्यार्थालापलीलया चावधीरयति भगवति कमलसम्भवे, कुमारी किञ्चिदुन्मुक्तबालभावे भूषितनवयौवने वयसि वर्तमाना, गृहीतचामरप्रचलितभुजलता पितामहमुपवीजयन्ती, निर्भर्त्सनताडनजनितरागाभ्यामिव स्वभावारुणाभ्यां चरणपल्लवाभ्यामुद्भासमाना, शिष्यद्वयेनेव पदक्रममुखरेण नूपुरयुगलेन वाचालितचरणा, धर्मनगरतोरणस्तम्भविभ्रमं बिभ्राणा जङ्घाद्वितयं, सलीलमुक्तकलहंसकुलकलालापिनि मेखलादाम्नि विन्यस्तवामहस्तकिसलया, विद्वन्मानसनिवासलग्नेनेवांसावलम्बिना गुणकलापेन ब्रह्मसूत्रेण पवित्रीकृतकाया, भास्वन्मध्यनायकमनेकमुक्तानुयातमपवर्गमार्गमिव हारमुरसा समुद्वहन्ती, वदनप्रविष्टसर्वविद्यावधूचरणालक्तकरसपाटलेनेव स्फुरता दशनच्छदेन विराजमाना, सङ्क्रान्तकमलासनकृष्णाजिनप्रतिबिम्बामधुरगीताकर्णनावकीर्णशशिहरिणमिव कपोलस्थलीं दधाना, तिर्यक् सावज्ञमुन्नमितैकभ्रूलता, श्रोत्रमेकं विस्वरश्रवणकलुषितं प्रक्षालयन्तीवापाङ्गनिर्गतेन लोचनांशुजलप्रवाहेण इतरश्रवणेन च विकसितसितसिन्दुवारमञ्जरीजुषा हसतेव प्रकटितविद्यामदा, श्रुतिप्रणयिभिः प्रणवैरिव कर्णावतंसमधुकरकुलैरुपास्यमाना सूक्ष्मविमलेन प्रज्ञाप्रतानेनेवांशुकेनाच्छादिततनुलता, वाङ्मयमिव निर्मलं दशनज्योत्स्नालोकं दिक्षु विकिरन्ती देवी सरस्वती श्रुत्वा जहास।

दृष्ट्वा तु तां तथा हसन्तीं स मुनिः 'आः! पापे! दुर्गृहीतविद्यालवावलेपदुर्विदग्धे! ननु मामुपहससी'त्युक्त्वा शिरःकम्पविशीर्यमाणबन्धविशरारोरुन्मिषत्तडित्पिङ्गलिम्नो जटाकलापस्य रोचिषा सिञ्चन्निव रोषदहनद्रवेण दशदिशः, कृतकालसन्नि-

धानामिवान्धकारितललाटाष्टापदाम् अन्तकमण्डनपत्रभङ्गमकरिकां भ्रुकुटिमाबध्नन् अतिलोहितेन चक्षुषा स्वरुधिरोपहारमिवामर्षदेवतायै प्रयच्छन् निर्दयदष्टदशनच्छदो दन्तांशुच्छलेन भयपलायमानां देवीं वाचमिव निरुन्धन्, अंसस्रंसिनः शापशासनपटस्येव ग्रथ्नन् ग्रन्थिमन्यथा कृष्णाजिनस्य, स्वेदप्रतिबिम्बितैः शापशङ्काशरणागतैरिव सुरासुरमुनिभिः प्रतिपन्नसर्वावयवः कोपकम्पतरलिताङ्गुलिना करेण प्रसा न लग्नामक्षरमालिकामिवाक्षमालिकां विक्षिप्य कामण्डलवेन वारिणा समुपस्पृश्य शापजलं जग्राह।

अत्रान्तरे च स्वयम्भुवोऽभ्याशे समुपविष्टा देवी मूर्तिमती पीयूषफेनपिण्ड पाण्डरं कल्पद्रुमदुकूलवल्कलं वसाना, बिसतन्तुमयेनाच्छेनांशुकेनोन्नतस्तनमध्यनिबिडनिबद्धगात्रिकाग्रन्थिः, तपोनिर्मितत्रिभुवनविजयपताकाभिरिव तिसृभिर्भस्मपुण्ड्रकराजिभिर्विराजितललाटाङ्कणा, स्कन्धावलम्बिना फेनधवलेन तपःप्रभावकुण्डलीकृतेन गगनगङ्गास्रोतसेव योगपट्टकेन विरचितवैकक्ष्यका, सव्येन ब्रह्मोत्पत्तिपुण्डरीकमुकुलमिव स्फाटिकं कमण्डलुं करेण कलयन्ती, दक्षिणमक्षमालाकृतपरिक्षेपं कम्बुनिर्मितोर्मिकादन्तुरं तर्जनतरलिततर्जनीकमुत्क्षिपन्ती करं "आः पाप! क्रोधोपहत! दुरात्मन्! अनात्मज्ञ! ब्रह्मबन्धो! मुनिखेटक! निराकृते! कथमात्मस्खलितविलक्षः सकल सुरासुरमुनिमनुजवन्दनीयां त्रिभुवनमातरं भगवतीं सरस्वतीं शप्तुमभिलषसि' इत्यभिदधाना रोषविमुक्तवेत्रासनैरोङ्कारमुखरमुखैरुत्क्षेपडोलायमानजटाभारभरितदिग्भिः परिकरबन्धभ्रमितकृष्णाजिनपटच्छायाश्यामायमानदिवसैः अमर्षनिश्वासडोलाप्रेङ्खोलितब्रह्मलोकैः सोमरसमिव स्वेदविसरव्याजेन स्रवद्भिरग्निहोत्रपवित्रभस्मस्मेरललाटैः कुशतन्तुचीरचीवरिभिराषाढिभिः प्रहरणीकृतकमण्डलुमण्डलैर्मूर्तैश्चतुर्भिर्वेदैस्सह बृसीमपहाय साबित्री समुत्तस्थौ।

ततो 'मर्षय भगवन्! अभूमिरेषा शापस्य' इत्यनुनाथ्यमानोऽपि तापसैः 'उपाध्याय! स्खलितमेकं क्षमस्वे'ति बद्धाञ्जलिपुटैरनुनाथ्यमानोऽपि स्वशिष्यैः, पुत्रक! मा कृथास्तपसः प्रत्यूहमिति निवार्यमाणोऽप्यत्रिणा, रोषावेशविवशो दुर्वासाः

दुर्विनीते! व्यपनयामि ते विद्यालवावलेपजनितामुन्नतिम्। अधस्ताद्गच्छ मर्त्य-लोकम्' इत्युक्त्वा तच्छापोदकं विससर्ज। ततः प्रतिशापदानोद्यतां च सावित्रीं 'सखि! संहर रोषम्। असंस्कृतमतयोऽपि जात्यैव द्विजन्मानो माननीयाः' इत्य-भिदधाना सरस्वत्येवैनां न्यवारयत्।

ಟಿಪ್ಪಣಿಗಳು :

नमस्तुङ्ग—ಈ ಪದ್ಯದಲ್ಲಿ ಕವಿಯು ರೂಪಕಾಲಂಕಾರವನ್ನು ಬಳಸಿದ್ದಾನೆ.

स्वं लोकम्—ಎಂದು ಪದ ವಿಭಾಗ ''वा पदान्तस्य" ಎಂಬುದರಿಂದ ಸಾನುನಾಸಿಕ ಲಕಾರ

पद्मविष्टरे—ಕಮಲಾಸನದಲ್ಲಿ ''विष्टरः पीठमासनम्" ಹಲಾಯುಧ ಕೋಶ

ब्रह्मोद्या—ಪರಬ್ರಹ್ಮ ಪ್ರತಿಪಾದಕವಾದ

प्रजापतयः—मरीचिरङ्गिराश्चात्रिः पुलस्त्यः पुलहः क्रतुः।

वसिष्ठः परमेष्ठी च विवस्वान् सोम एव च॥

कर्दमश्चापि यः प्रोक्तः क्रतो विक्रतिरेव च।

एकविंशतिरुत्पन्नाः ते प्रजापतयः स्मृताः॥

अपचितभाञ्जि—ಪೂಜಾಪರವಾದ

विसंवादः—ಅಭಿಪ್ರಾಯಕ್ಕೆ ವಿರುದ್ಧವಾದ ಮಾತು

पदक्रममुखरेण—ಪದನ್ಯಾಸ, ವೇದದ ಪದ ಕ್ರಮಗಳಿಂದ ವಾಚಾಲಿತವಾದ

भास्वन्मध्यनायकम्—ಹೊಳೆಯುವ ಹಾರ ಮಧ್ಯದ ರತ್ನವುಳ್ಳ

हारमध्ये स्थितं रत्नं तरलं नायकं विदुः ಹಲಾಯುಧ

श्रुतिप्रणयिभिः—ಕಿವಿಮುಟ್ಟುವ, ವೇದ ಪರಿಚಯವುಳ್ಳ

आः—ಕೋಪಸೂಚಕಾವ್ಯಯ आस्तु स्यात् कोपपीडयोः—ಅಮರ

अष्टापदम्—ಪಗಡೆಕಾಯಿ ''अष्टापदः शारिफलम्''—ಅಮರ

अभ्याशे—ಸಮೀಪದಲ್ಲಿ

वैकक्ष्यक—ಎದೆಯ ಮೇಲೆ ಸೊಟ್ಟಗೆ ಧರಿಸಿದ ಮಾಲೆ

ब्रह्मबंधो—ಬ್ರಾಹ್ಮಣಾಧಮನೇ?

निराकृते?—ಶ್ರೋತ್ರಿಯನಲ್ಲದವನೇ?

चीवरम्—ಭಿಕ್ಷು ವಸ್ತ್ರ

बृसीम्—ವ್ರತಿಗಳ ಆಸನ, ಹುಲ್ಲಿನಚಾಪೆ

## ಅಭ್ಯಾಸಗಳು

1 ದುರ್ವಾಸನು ಕೆರಳಲು ಕಾರಣವೇನು ?
2. ಕೆರಳಿದ ದುರ್ವಾಸನನ್ನು ಕವಿಯು ಹೇಗೆ ವರ್ಣಿಸಿದ್ದಾನೆ ?
3 ಸರಸ್ವತಿಯ ವರ್ಣನೆಯನ್ನು ಸಂಗ್ರಹಿಸಿ.
4. ದುರ್ವಾಸನು ಸರಸ್ವತಿಗೆ ಕೊಟ್ಟ ಶಾಪವೇನು? ಅದರ ಕಾರಣವನ್ನು ಗ್ರಂಥದಲ್ಲಿರುವಂತೆ ಸಂಗ್ರಹಿಸಿ.

---

# 2. ಪದ್ಯಕಾವ್ಯಂ

**ಪದ್ಯ ಕಾವ್ಯ ಪರಂಪರೆ :**

ಸಂಸ್ಕೃತ ಪದ್ಯಕಾವ್ಯಕ್ಕೆ ಇಪ್ಪತ್ತೈದು ಶತಮಾನಗಳಿಗೂ ಮಿಗಿಲಾದ ಪರಂಪರೆಯಿದೆ. ಸಂಸ್ಕೃತದ ಆದಿಕವಿ ವಾಲ್ಮೀಕಿ. ಆದಿಕಾವ್ಯ ಆತನ ರಾಮಾಯಣ. ಆದರೆ ರಾಮಾಯಣದಲ್ಲೇ

ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ
ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ

—ಎಂಬ ಉಕ್ತಿ ಇದೆ. ವೇದವೇ ರಾಮಾಯಣವಾಯಿತೆಂದ ಮೇಲೆ ಅತಿ ಪ್ರಾಚೀನವಾದ ವೇದಗಳಲ್ಲೂ ಕಾವ್ಯಗುಣವಿರಬೇಕಾಯಿತು. ಈ ಉಕ್ತಿ ಸತ್ಯವಾದುದು. ಋಗ್ವೇದದ ಉಷಸ್ ಸೂಕ್ತ, ರಾತ್ರಿ ಸೂಕ್ತ, ಜೂಜುಗಾರನ ಸೂಕ್ತ, ಅಥರ್ವವೇದದ ಭೂಮಿ ಸೂಕ್ತ, ವರುಣ ಸೂಕ್ತ ಇತ್ಯಾದಿಗಳಲ್ಲಿ ಅಲಂಕಾರಮಯವಾದ ಕಾವ್ಯಗುಣವಿದೆ. ಉಪನಿಷತ್ತಿನ ಉಕ್ತಿಗಳಲ್ಲೂ ಈ ಗುಣವನ್ನು ಕಾಣಬಹುದು. ಆದರೆ ವೇದಾದಿಗಳೆಲ್ಲವೂ ಅಪೌರುಷೇಯ, ಸಾಕ್ಷಾತ್ ಕೃತಧರ್ಮರೂ ದ್ರಷ್ಟಾರರೂ ಆದ ಋಷಿಗಳ ವಾಗ್ರೂಪ ಮಂತ್ರಗಳ ಸಂಹಿತೆ ಎಂಬ ಭಾವನೆಯಿರುವುದರಿಂದ ಅವು ತಾತ್ತ್ವಿಕ–ಧಾರ್ಮಿಕ ಕೃತಿಗಳೆನ್ನಬೇಕಾಗಿದೆ.

ಆದ್ದರಿಂದ ಮೇಲೆ ಸೂಚಿಸಿದಂತೆ ಕ್ರಿ. ಪೂ. ಸುಮಾರು ಐದು–ಆರನೆಯ ಶತಮಾನದಲ್ಲಿ ಕೃತಿರೂಪಕ್ಕೆ ಬಂದಿತೆನ್ನಲಾದ ರಾಮಾಯಣವೇ ಸಂಸ್ಕೃತದ ಆದಿಕಾವ್ಯ ಅದೇ ವೇಳೆಗೆ ಮೂಡಿಬಂದ ವ್ಯಾಸಕೃತ ಮಹಾಭಾರತವು ಬೃಹತ್ತಿನಲ್ಲೂ ಮಹತ್ತಿನಲ್ಲೂ ರಾಮಾಯಣಕ್ಕಿಂತ ಮಿಗಿಲಾದುದು. ಅದರಲ್ಲಿ ಆರು ಕಾಂಡಗಳ ಇಪ್ಪತ್ತುನಾಲ್ಕು ಸಾವಿರ ಪದ್ಯಗಳಿದ್ದರೆ ಇದರಲ್ಲಿ ಹದಿನೆಂಟು ಪರ್ವಗಳ ಒಂದು ಲಕ್ಷಕ್ಕೂ ಮೀರಿದ ಪದ್ಯಗಳಿವೆ.

ವ್ಯಾಸ–ವಾಲ್ಮೀಕಿಗಳು ಋಷಿಕವಿಗಳು. ಅವರ ಕೃತಿಗಳು ಇತಿಹಾಸ ಕಾವ್ಯಗಳು. ವೈದಿಕ ಭಾವನೆಗಳನ್ನೂ ಲೌಕಿಕ ಭಾವನೆಗಳನ್ನೂ ಒಟ್ಟಿಗೆ ಸೇರುವ ಸೇತುವೆಗಳು. ಇಹಪರವನ್ನು ಬೆಸೆಯುವ ತಪೋಶಕ್ತಿಯಿಂದ ಪ್ರಾದುರ್ಭೂತವಾದುವುಗಳು.

ಈ ಋಷಿಕವಿಗಳಾದ ಮೇಲೆ ಕಾಲಕ್ರಮದಲ್ಲಿ ಉದಯಿಸಿದವರು ಅಶ್ವಘೋಷ, ಕಾಳಿದಾಸ, ಭಾರವಿ, ಭರ್ತೃಹರಿ ಮುಂತಾದವರು—ಕ್ರಿಸ್ತಶಕೆಯ ಪ್ರಾರಂಭದಿಂದೀಚೆಯವರು.

ಅಶ್ವಘೋಷ (ಕ್ರಿ.ಶ. ಒಂದನೆಯ ಶತಮಾನ) ನ ಕೃತಿಗಳಲ್ಲಿ ಬುದ್ಧಚರಿತ, ಸೌಂದರನಂದ ಎಂಬವು ಮಹಾಕಾವ್ಯಗಳು.

ಕಾಳಿದಾಸನ ಹೆಸರು ಮತ್ತು ಕೃತಿಗಳ ಪರಿಚಯ ನಿಮಗೆ ಸ್ವಲ್ಪಮಟ್ಟಿಗಾದರೂ ಆಗಿದೆ. ಇವನ ಕಾಲ ಗುಪ್ತರ ಎರಡನೆಯ ಚಂದ್ರಗುಪ್ತ (ಕ್ರಿ.ಶ. ಸು. 380–410)ನ ಕಾಲವೆಂದು ಬಹುಮತಾಭಿಪ್ರಾಯ. ರಘುವಂಶ, ಕುಮಾರಸಂಭವ ಈತನ ಮಹಾಕಾವ್ಯಗಳು. ಮೇಘದೂತ, ಋತುಸಂಹಾರ ಎಂಬ ಎರಡು ಖಂಡಕಾವ್ಯಗಳು. ಕಾಳಿದಾಸ ವರಕವಿ, ಈತನ ಶೈಲಿ ಸರಳ, ಸುಂದರ, ಮಧುರ. ಆದ್ದರಿಂದಲೇ ವಾಲ್ಮೀಕಿಯ ರಾಮಾಯಣದಂತೆ ಪ್ರಾರಂಭಿಕ ಸಂಸ್ಕೃತಾಭ್ಯಾಸಿಗಳಿಗೂ ನಿಲುಕುವಂತಹವು. ಈತನ ಕೃತಿಗಳು ಹೃದಯದಿಂದ ಹೊರಟ ಕಾವ್ಯಧಾರೆ. ಹೃದಯವನ್ನು ಮುಟ್ಟುತ್ತದೆ; ವೃಥಾ ತಲೆಯನ್ನು ತಿನ್ನುವುದಿಲ್ಲ ಕಾಳಿದಾಸನಾದ ಮೇಲೆ ಭರ್ತೃಹರಿ, ಭಾರವಿ, ಭಟ್ಟಿ, ಮಾಘ, ಶ್ರೀ ಹರ್ಷ ಇತ್ಯಾದಿಗಳು ಸಂಸ್ಕೃತಾಕಾಶದಲ್ಲಿ ಮೂಡಿ ಬಂದರು. ಭರ್ತೃಹರಿ (ಕ್ರಿ.ಶ 600) ನೀತಿ ಕವಿ. ಸುಭಾಷಿತಗಳ ವಿಶಾರದ; ನೀತಿ, ಶೃಂಗಾರ ಮತ್ತು ವೈರಾಗ್ಯಗಳನ್ನು ಅಧಿಕರಿಸಿ ಶತಕ ತ್ರಯ ರಚಿಸಿದ್ದಾನೆ. ಎಲ್ಲವೂ ಬಿಡಿ ಬಿಡಿಯಾದ ಮುತ್ತುಗಳು. ಅಸಾಧಾರಣ ಪ್ರತಿಭೆಯ ಈತ ಮಹಾಕಾವ್ಯ ರಚನೆಗೆ ಕೈ ಹಾಕಲಿಲ್ಲ. ಆತನ ಸುಭಾಷಿತಗಳ ಪರಿಚಯವಿನಿತೂ ಇಲ್ಲದ ಸಂಸ್ಕೃತ ವಿದ್ಯಾರ್ಥಿಗಳಿಲ್ಲ.

ಭಾರವಿ ವಿದ್ವತ್‌ಕವಿ. ವರಕವಿಯೂ ಹೌದು. ಮುಂದೆ ಬಂದ ಮಾಘ, ಶ್ರೀಹರ್ಷ, ಭಟ್ಟಿ ಮುಂತಾದ ಕೇವಲ ವಿದ್ವತ್ ಕವಿಗಳಿಗೂ ಹಿಂದೆ ಇದ್ದ ಕಾಳಿದಾಸ ಭರ್ತೃಹರಿ ಮುಂತಾದ ವರಿಗೂ ಅನೇಕ ವಿಚಾರಗಳಲ್ಲಿ ಈತನು ಪ್ರಥಸ್ಥ. ಕಿರಾತಾರ್ಜುನೀಯ ಈತನ ಕೃತಿ.

ಮೇಲೆ ಸೂಚಿಸಿದಂತೆ ಮಾಘ (ಶಿಶುಪಾಲವಧ) ಶ್ರೀಹರ್ಷ (ನೈಷಧ-ನಳಚರಿತ್ರೆ) ಭಟ್ಟಿ (ಭಟ್ಟಿ ಕಾವ್ಯ—ವ್ಯಾಕರಣ ಪ್ರಧಾನವಾದುದು) ಇವರೆಲ್ಲರೂ ವಿದ್ವತ್ ಕವಿಗಳು. ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ—ಎಂಬ ಉಕ್ತಿ ಇವರುಗಳ ಶಬ್ದ ಸಂಪತ್ತಿಗೆ ವಿಶೇಷಣವೇ ಹೊರತು ಪ್ರತಿಭಾ ಸಂಪತ್ತಿಗಲ್ಲ. ಭಾರವಿಯು ಕಿರಾತಾರ್ಜುನೀಯದ ಹದಿನೈದನೆಯ ಸರ್ಗದಂತೆ ಇವರ ಕೃತಿಗಳೆಲ್ಲಾ ತಲೆತಿನ್ನುವಂತಹವು. ಪಾಂಡಿತ್ಯ ಗರಡಿಯ ಕಸರತ್ತಿನಲ್ಲಿ ಗುದ್ದಾಡಿದವರಾಗಿರಬೇಕು—ಉಪಾಧ್ಯಾಯರು-ವಿದ್ಯಾರ್ಥಿಗಳು ಇಬ್ಬರೂ ಇವುಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ.

**ಐತಿಹಾಸಿಕ ಕಾವ್ಯಗಳು:**

ಈ ಮೇಲಿನ ಮಹಾಕಾವ್ಯಗಳಲ್ಲದೆ ಐತಿಹಾಸಿಕ ಪದ್ಯಕಾವ್ಯಗಳಿಗೂ ಸಂಸ್ಕೃತದಲ್ಲಿ ಅಭಾವವಿಲ್ಲ. ಈಗಾಗಲೇ ಬಾಣಭಟ್ಟನ ಹರ್ಷಚರಿತೆ (ಗದ್ಯ) ಯ ವಿಚಾರ ನಿಮಗೆ ತಿಳಿದಿದೆ. ಇದೇ ರೀತಿ ಪದ್ಮಗುಪ್ತನು (ಕ್ರಿ.ಶ. 1000) ಹದಿನೆಂಟು ಸರ್ಗಗಳಲ್ಲಿ ತನ್ನ ಆಶ್ರಯದಾತ ಸಿಂಧುರಾಜನನ್ನು

ಕುರಿತು 'ನವಸಾಹಸಾಂಕ ಚರಿತೆ'ಯನ್ನು ಕಾಶ್ಮೀರಕ ಬಿಲ್ಹಣನು (ಕ್ರಿ.ಶ. 1100–1200) ಹದಿನೆಂಟು ಸರ್ಗಗಳಲ್ಲಿ ಕರ್ನಾಟಕದ ಚಾಲುಕ್ಯವಂಶದ ರಾಜ ತ್ರಿಭುವನಮಲ್ಲ ವಿಕ್ರಮಾದಿತ್ಯನನ್ನು ಕುರಿತು ವಿಕ್ರಮಾಂಕ ದೇವ ಚರಿತೆಯನ್ನು ಇದೇ ಕಾಲದಲ್ಲಿದ್ದ ಕಲ್ಹಣನು ರಾಜತರಂಗಿಣಿಯೆಂಬ (7826 ಪದ್ಯಗಳು) ಮಹಾಗ್ರಂಥವನ್ನು ರಚಿಸಿದ್ದಾರೆ.

ಇವುಗಳಲ್ಲದೆ ಜಲ್ಹಣನ (ಕ್ರಿ. ಶ. 1100) "ಸೋಮಪಾಲ ವಿಲಾಸ, ಸಂಧ್ಯಾಕರ ನಂದಿಯ ರಾಮಪಾಲ ಚರಿತ, ಹೇಮಚಂದ್ರನ ಕುಮಾರಪಾಲ ಚರಿತ ಕರ್ನಾಟಕದ ಕವಯಿತ್ರಿ ಗಂಗಾಂಬಿಕೆಯ ಮಧುರಾವಿಜಯ ಇವುಗಳೂ ಸಹ ಸುಪ್ರಸಿದ್ಧ ಐತಿಹಾಸಿಕ ಕಾವ್ಯಗಳು

**ಲಘು ಕಾವ್ಯಗಳು**

ಮೇಲೆ ಹೇಳಿದ ಕಾವ್ಯಗಳಲ್ಲದೆ ಕಾಳಿದಾಸನದೆಂದು ಹೇಳಲಾಗಿರುವ ಶೃಂಗಾರ ತಿಲಕ, ಘಟಕರ್ಪರಕವಿ (?)ಯ ಘಟಕರ್ಪರ ಅಮರುಕನ ಶತಕ, ಬಿಲ್ಹಣನ ಚೋರಪಂಚಾಶಿಕಾ, ಗೋವರ್ಧನಕವಿಯ ಆರ್ಯಾಸಪ್ತಶತೀ, ಜಯದೇವ ಕವಿಯ ಗೀತಗೋವಿಂದ, ಜಗನ್ನಾಥ ಪಂಡಿತ ರಾಜನ ಭಾಮಿನೀ ವಿಲಾಸ ಇವುಗಳು ಸುಪ್ರಸಿದ್ಧ ಶೃಂಗಾರಮಯ ಲಘುಕಾವ್ಯಗಳು.

**ಸುಭಾಷಿತಗಳು**

ಸಾವಿರಾರು ಪ್ರಸಿದ್ಧ ಹಾಗೂ ಅಪ್ರಸಿದ್ಧಕವಿಗಳ ಶೃಂಗಾರ ಮತ್ತು ಚಾಟುಪದ್ಯಗಳು, ಸುಭಾಷಿತಗಳನ್ನು ಸಂಗ್ರಹಿಸಿದ ಅನೇಕ ಗ್ರಂಥಗಳು ಪ್ರಸಿದ್ಧವಾಗಿವೆ. ಅವುಗಳಲ್ಲಿ ಅಜ್ಞಾತ ಕವಿಯ ಕವೀಂದ್ರವಚನಸಮುಚ್ಚಯ, ಶ್ರೀಧರದಾಸನ ಸದುಕ್ತಿ ಕರ್ಣಾಮೃತ (ಕ್ರಿ.ಶ. 1205) ಬಿಲ್ಹಣನ ಸೂಕ್ತಿಮುಕ್ತಾವಲೀ (1300) ಶಾರ್ಙ್ಗಧರನ ಪದ್ಧತಿ (1363) ವಲ್ಲಭ ದೇವನ ಸುಭಾಷಿತಾವಲಿ (1500) ಅಮಿತಗತಿಯ ಸುಭಾಷಿತ ರತ್ನ ಸಂದೋಹ, ಶಂಭುನೃಪನ ಅನ್ಯೋಕ್ತಿ ಮುಕ್ತಾಲತಾ ಮುಂತಾದುವು ಮುಖ್ಯವಾದುವು.

ಈ ಹಿಂದೆಯೇ ಹೇಳಿದಂತೆ ಸಂಸ್ಕೃತ ಪದ್ಯಕಾವ್ಯ ಪರಂಪರೆ ಬಹುಮುಖವಾದುದು. ಪ್ರಪ್ರಥಮವಾಗಿ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನೂ ಅಮರವಾಣಿ ಸಂಸ್ಕೃತ ಭಾಷೆಯ ಇತಿಹಾಸವನ್ನೂ ಅಭ್ಯಸಿಸುತ್ತಿರುವ ನಿಮಗೆ ಸ್ಥೂಲವಾಗಿ ನಾನಾ ಸಾಹಿತ್ಯ ಪ್ರಕಾರಗಳ ಪರಿಚಯವನ್ನಿಲ್ಲಿ ಮಾಡಿಕೊಡಲು ಪ್ರಯತ್ನಿಸಲಾಗಿದೆ. ವಿಡಂಬನ ಸಾಹಿತ್ಯ, ಸ್ತೋತ್ರ ಸಾಹಿತ್ಯ, ಚಾಣಕ್ಯ ನೀತಿ, ಶುಕ್ರನೀತಿ ಇತ್ಯಾದಿ ಕೃತಿಗಳೂ ಸಂಸ್ಕೃತದಲ್ಲಿ ಹೇರಳವಾಗಿವೆ.

ಹೀಗೆ ಸಂಸ್ಕೃತ ಪದ್ಯಕಾವ್ಯ ವಾಹಿನಿಯು ವೇದಗಳ ಕಾಲದಲ್ಲಿ (ಕ್ರಿ. ಪೂ. 2000-3000?) ಪ್ರಾರಂಭವಾಗಿ ಕ್ರಿ. ಶ. ಹತ್ತೊಂಬತ್ತನೆಯ ಶತಮಾನದವರೆಗೂ ನಿರಂತರವಾಗಿ ಹರಿದು ಇಂದಿಗೂ ಸಹ ಜೀವನದಿಯಾಗಿ ಸಾಹಿತಿಗಳ ಸಾಹಿತ್ಯದಾಹಕ್ಕೆ ತಂಪೆರೆಯುತ್ತಿದೆ.

ಈ ಮುಂದೆ ಪಠ್ಯವಾಗಿ ಇಟ್ಟಿರುವ ಭಾಗಗಳು ಸಂಸ್ಕೃತ ಪದ್ಯಕಾವ್ಯದ ಲಲಿತ ಹಾಗೂ ಪ್ರೌಢ ಶೃಂಗಗಳನ್ನು ಪ್ರತಿನಿಧಿಸುತ್ತವೆ.

